# ಪಾವನ ಯಾತ್ರೆ

[ ಶ್ರೀ ಮಧ್ವಾಚಾರ್ಯರ ಸಂಪರ್ಕಕ್ಕೊಳಗಾದ ಸ್ಥಳಗಳಿಗೆ ನಡೆಸಲಾದ ಯಾತ್ರೆಯ ಚಿತ್ರಣ ]



'ನಮಃ ಶ್ರೀಮನ್‌ಮಧ್ವ ಪ್ರದಿಶ ಸುದೃಶಂ ನೋ ಜಯಜಯ'

[ ಶ್ರೀ ಮಧ್ವಾಚಾರ್ಯರು ಅದೃಶ್ಯರಾಗಿರುವ ಹಾಗೂ ಅದೃಶ್ಯರಾಗಿ ವಿಶೇಷವಾಗಿ ಸನ್ನಿಹಿತರಾಗಿರುವ ಉಡುಪಿ ಅನಂತಾಸನನ ಬಲಮುಗ್ಗುಲಲ್ಲಿ ಸ್ಥಾಪಿಸಲಾದ ಪ್ರತಿಮೆ—ಒಂದು ಹಸ್ತದಲ್ಲಿ ಗ್ರಂಥಗಳನ್ನು ಧರಿಸಿಕೊಂಡು, ಮತ್ತೊಂದು ಹಸ್ತದಿಂದ ಅಭಯ ಪ್ರದಾನ ಮಾಡುತ್ತ 'ಶಾಸ್ತ್ರಸಂಪನ್ನರಿಗೆ ಭಯವಿಲ್ಲ' ಎಂಬ ಸಂದೇಶ ನೀಡುವ ಭಂಗಿಯಲ್ಲಿ. ]

ಪರವಿದ್ಯಾ ಪ್ರಕಾಶನ

ಮೂಡುಸಗ್ರಿ, ಉಡುಪಿ

# ಯಾತ್ರೆಯನ್ನು ಫಲಪ್ರದವನ್ನಾಗಿ ಮಾಡುವ ಮಾನುಷವ್ರತ ಹಾಗೂ ದೈವವ್ರತ

ಶರೀರನಿಯಮಂ ಪ್ರಾಹುರ್ಬ್ರಾಹ್ಮಣಾಃ ಮಾನುಷಂ ವ್ರತಮ್ ।
ಮನೋವಿಶುದ್ಧಾಂ ಬುದ್ಧಿಂ ಚ ದೈವಮಾಹುರ್ವ್ರತಂ ದ್ವಿಜಾಃ ॥

ಜ್ಞಾನಿಗಳು ಶರೀರಶುದ್ಧಿಗೆ ಬೇಕಾದ ನಿಯಮಗಳನ್ನು 'ಮಾನುಷವ್ರತ' ಎಂದು ಕರೆದರೆ, ಮನಸ್ಸಿನ ಮೂಲಕ ಗಳಿಸಿಕೊಳ್ಳಬೇಕಾದ ಬುದ್ಧಿಯ ಶುದ್ಧಿಯನ್ನು 'ದೈವವ್ರತ' ಎಂದು ಗುರುತಿಸಿರುವರು.

ತೀರ್ಥಯಾತ್ರೆಗೆ ಹೊರಟಿದ್ದ ಯುಧಿಷ್ಠಿರಾದಿಗಳಿಗೆ ಯಾತ್ರೆಯು ಶಾಸ್ತ್ರೋಕ್ತ ಫಲಪ್ರದವಾಗಬೇಕಾದರೆ ಅಳವಡಿಸಿಕೊಳ್ಳಬೇಕಾದ ಎರಡು ವ್ರತಗಳೆಂದು ಋಷಿಗಳು ಬೋಧಿಸಿದ್ದರು.

ಮಹಾಭಾರತದ ವನಪರ್ವದ ತೀರ್ಥಯಾತ್ರಾಪರ್ವ [93-21] ಉಲ್ಲೇಖಿಸಿರುವ ಈ ಎರಡು ವ್ರತಗಳ ಅನುಷ್ಠಾನಕ್ಕೆ ಪಾವನಯಾತ್ರೆಯಲ್ಲಿ ಒಳ್ಳೆಯ ಅವಕಾಶವಿತ್ತು, ಮಠದ ವತಿಯಿಂದ ನಡೆದಿದ್ದು, ಯತಿಗಳ ಸಹಯೋಗವೂ ಇದ್ದದ್ದರಿಂದ ಶುದ್ಧ ಹಾಗೂ ಪವಿತ್ರ ಆಹಾರದ ಸೇವನೆಯೇ ಮುಂತಾದ ಶರೀರಶುದ್ಧಿಪ್ರದ ನಿಯಮಗಳ ಮಾನುಷವ್ರತ ಮತ್ತು ಅಲ್ಲಲ್ಲಿ ನಡೆಯುತ್ತಿದ್ದ ಪ್ರವಚನಗಳಿಂದಾಗಿ ಬುದ್ಧಿಶುದ್ಧಿಯ ದೈವವ್ರತ ವಿಶೇಷವಾಗಿ ಅಳವಡಿಸಿಕೊಳ್ಳಲ್ಪಡುತ್ತಿತ್ತು

ಆದ್ದರಿಂದ ಮಹಾಭಾರತ ಪ್ರಸ್ತುತಪಡಿಸಿದ ಮಾನದಂಡದ ಪ್ರಕಾರವೂ 'ಪಾವನಯಾತ್ರೆ' ಶಾಸ್ತ್ರೋಕ್ತ ಫಲಪ್ರದವಾಗಿದ್ದು ಯಶಸ್ವಿ ಎನಿಸಿದೆ.

# ಪಾವನಯಾತ್ರೆ

[ಶ್ರೀ ಮಧ್ವರ ಸಂಪರ್ಕಕ್ಕೊಳಗಾದ ಸ್ಥಳಗಳಿಗೆ ನಡೆಸಲಾದ ಯಾತ್ರೆಯ ಚಿತ್ರಣ]

ಬರೆದವರು : ಸಗ್ರಿ ರಾಘವೇಂದ್ರ ಉಪಾಧ್ಯಾಯ

ಪರವಿದ್ಯಾ ಪ್ರಕಾಶನ

ಮೂಡುಸಗ್ರಿ, ಉಡುಪಿ

ಪಾವನಯಾತ್ರೆ

[ಶ್ರೀ ಮಧ್ವರ ಸಂಪರ್ಕಕ್ಕೊಳಗಾದ ಸ್ಥಳಗಳಿಗೆ ನಡೆಸಲಾದ ಯಾತ್ರೆಯ ಚಿತ್ರಣ]



ಪ್ರಥಮ ಮುದ್ರಣ : 1996 ಅಕ್ಟೋಬರ್

ಬೆಲೆ : 30-00 ರೂ.

ಪ್ರಕಾಶನ : ಪರವಿದ್ಯಾ ಪ್ರಕಾಶನ
ಮೂಡುಸಗ್ರಿ
ಉಡುಪಿ—2

ಮುದ್ರಣ : ಸುಗುಣಾ ಪ್ರಿಂಟರ್ಸ್
ರಥಬೀದಿ, ಉಡುಪಿ

# "ಶ್ರೀವತ್ಸನಾರಾಯಣಮಾನತೋಽಸ್ಮಿ"



ಶ್ರೀಮದಾಚಾರ್ಯರ ಅತ್ಯಂತ ಪ್ರೀತಿಗೆ ಪಾತ್ರರಾಗಿದ್ದ ತ್ರಿವಿಕ್ರಮ ಪಂಡಿತರಿಗೆ ಆಚಾರ್ಯರು ಶ್ರೀವತ್ಸನಾರಾಯಣ ವಿಗ್ರಹವನ್ನು ಅನುಗ್ರಹಿಸಿದ್ದರು. ಅಂಗುಷ್ಠಗಾತ್ರದ ನಾರಾಯಣ ವಿಗ್ರಹ. ಎದೆಯಲ್ಲಿ ಲಕ್ಷ್ಮಿ. 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ....' ಎಂಬ ಮಾತಿನಲ್ಲಿಯ ಲಕ್ಷ್ಮೀನಾಮವನ್ನು ತ್ರಿವಿಕ್ರಮ ಪಂಡಿತರು ತಮ್ಮ 'ತತ್ತ್ವಪ್ರದೀಪ' [ಬ್ರ. ಸೂ. ಭಾ. ಟಿ. 1-1-23] ದಲ್ಲಿ 'ವಕ್ಷಸಿ ಲಕ್ಷಣ ಭೂತಾ ಲಕ್ಷ್ಮೀಃ....' ನಾರಾಯಣನ ಎದೆಯಲ್ಲಿ ಲಕ್ಷಣವಾಗಿ ವಿರಾಜಿಸುತ್ತಿರುವವಳು ಲಕ್ಷ್ಮೀ ಎಂದು ವ್ಯಾಖ್ಯಾನಿಸಲು ಸ್ಫೂರ್ತಿ ನೀಡಿದ್ದಿರಬಹುದಾದ ವಿಗ್ರಹವಿದು.

ತ್ರಿವಿಕ್ರಮ ಪಂಡಿತರು ವಾಸವಾಗಿದ್ದ ಮನೆ 'ಕಾವು ಮಠ'ದಲ್ಲಿ ಈಗಲೂ ಪೂಜೆಗೊಳ್ಳುತ್ತಿರುವ ಈ ಪ್ರತಿಮೆಯನ್ನು ಶ್ರೀ ವಿದ್ಯಾಮಾನ್ಯತೀರ್ಥರು ಪಾವನ ಯಾತ್ರೆಯ ಯಾತ್ರಿಕರಿಗೆ ದರ್ಶನ ಮಾಡಿಸುತ್ತಿರುವುದು.

ಶ್ರೀ ವಿದ್ಯಾಮಾನ್ಯತೀರ್ಥರ ಅಂಗೈಯಲ್ಲಿ ಮೆರೆಯುತ್ತ ಅವರ ಹೃದಯ ಮಂಟಪದಲ್ಲಿ ಆರಾಧಿತನಾದ

**'ಶ್ರೀವತ್ಸನಾರಾಯಣ'ನಿಗೆ**

—ಈ ಪಾವನಯಾತ್ರೆ ಸಮರ್ಪಿತ—

## ವಿಷಯಾನುಕ್ರಮಣಿಕೆ





**ಮೊದಲ ಮಾತು :**

# 'ಪಾವನಯಾತ್ರೆ'ಯ ದಾಖಲೆ

ಸಾಮಾನ್ಯವಾಗಿ ಯಾತ್ರೆಯ ಉದ್ದೇಶ ಪುಣ್ಯದ ಸಂಪಾದನೆಯಾಗಿರುತ್ತದೆ. ಆದರೆ 6-4-96ರಿಂದ 12-4-96ರ ವರೆಗಿನ ಸಪ್ತಾಹಾವಧಿಯಲ್ಲಿ ಪಲಿಮಾರು ಮಠಾಧೀಶರ ನೇತೃತ್ವದಲ್ಲಿ ಮೈದಾಳಿದ 'ಪಾವನಯಾತ್ರೆ'ಯ ಉದ್ದೇಶ ಪುಣ್ಯ ಸಂಪಾದನೆಯ ಜೊತೆಗೆ ಶ್ರೀಮದಾಚಾರ್ಯರ ಕುರಿತು ವಿಶೇಷ ಮಾಹಿತಿಗಳ ಸಂಗ್ರಹ, ಶ್ರೀಮದಾಚಾರ್ಯರ ಚರಿತ್ರೆಯಲ್ಲಿ ಇನ್ನಷ್ಟು ದಾರ್ಢ್ಯವನ್ನು ತಂದು ಕೊಳ್ಳುವುದು. ಶ್ರೀಮದಾಚಾರ್ಯರ ಸಂಪರ್ಕಕ್ಕೊಳಗಾದ ಪ್ರದೇಶಗಳಲ್ಲಿ, ದೇವಾಲಯಗಳಲ್ಲಿ ಸೂಕ್ತಗಳಾದ ಸ್ಮಾರಕಗಳ ನಿರ್ಮಾಣಕ್ಕೆ ಬೇಕಾದ ಸ್ಫೂರ್ತಿ ಯನ್ನು ಜಾಗೃತಗೊಳಿಸುವುದು—ಮುಂತಾದವೂ ಆಗಿದ್ದವು. ಯಾತ್ರೆಯ ಸ್ವರೂಪ, ಫಲ, ಪ್ರಭಾವಾದಿಗಳನ್ನು ಮತ್ತೆ ಮತ್ತೆ ಪರಿಶೀಲಿಸಿ, ವಿವೇಚಿಸಿ ಕೊಂಡರಷ್ಟೇ ಆ ಎಲ್ಲ ಉದ್ದೇಶಗಳು ಈಡೇರಲು ಸಾಧ್ಯ. ಅದಕ್ಕಾಗಿ ಯಾತ್ರೆಯ ಸ್ಪಷ್ಟಚಿತ್ರಣ ಯಾತ್ರೆಯಲ್ಲಿ ಪಾಲ್ಗೊಂಡವರಿಗೂ, ಪಾಲ್ಗೊಳ್ಳದವರಿಗೂ ದೊರಕುವಂತೆ ಯಾತ್ರೆಯ ವರದಿ, ಯಾತ್ರೆಯ ಅವಧಿಯಲ್ಲಿ ನೀಡಲಾದ ಸಂದೇಶ ಗಳ ಸಂಗ್ರಹ, ಯಾತ್ರೆಯಲ್ಲಿ ಸಂದರ್ಶಿಸಲಾದ ಪ್ರದೇಶಗಳ ಮಾಹಿತಿ, ಯಾತ್ರೆಯ ಪರಿಣಾಮಗಳು, ಯಾತ್ರಿಕರ ಅನುಭವ ಹಾಗೂ ಪರಿಚಯ—ಇವನ್ನೆಲ್ಲ ದಾಖಲಿಸಿದೆ ಈ 'ಪಾವನಯಾತ್ರೆ'.

ಆಗಾಗ್ಗೆ ಕೈಗೊಳ್ಳಬೇಕಾದ ಇಂತಹ 'ಪಾವನಯಾತ್ರೆ'ಗೆ ಇದು ಮಾರ್ಗ ದರ್ಶಕವೂ ಸ್ಫೂರ್ತಿಪ್ರದವೂ ಆಗಬಲ್ಲದೆಂದು ನಿರೀಕ್ಷಿಸಲಾಗಿದೆ.

- ಇದಕ್ಕೆ ಹೃತ್ಪೂರ್ವಕ 'ಆಶೀರ್ವಾದ' ನೀಡಿ ಹರಸಿದ ಶ್ರೀ ಶ್ರೀ ವಿದ್ಯಾಧೀಶತೀರ್ಥರಿಗೆ ಸಾಷ್ಟಾಂಗ ಪ್ರಣಾಮಪೂರ್ವಕ ಅಭಿವಂದನೆಗಳು.

- ಇದರ 'ಹಸ್ತಪ್ರತಿ'ಯನ್ನು ಸಮಗ್ರವಾಗಿ ಪರಿಶೀಲಿಸಿ ಸೂಕ್ತ ಸಲಹೆ ಸೂಚನೆಗಳನ್ನಿತ್ತ ಡಾ। ಪ್ರಭಂಜನಾಚಾರ್ಯರಿಗೆ ಕೃತಜ್ಞತಾಪೂರ್ವಕ

ಪ್ರಣಾಮಗಳು

● ಇದನ್ನು ಸಿದ್ಧಪಡಿಸುವಾಗ ಸಂದೇಶಗಳನ್ನು ಸಂಗ್ರಹಿಸುವಲ್ಲಿ ಶ್ರೀ ಗುರುಪ್ರಸಾದ್ ಇವರ ನೋಟ್ಸನ್ನೂ ಉಪಯೋಗಿಸಿಕೊಳ್ಳಲಾಗಿದೆ. ಪ್ರದೇಶಗಳನ್ನು ಪರಿಚಯಿಸುವಲ್ಲಿ ಶ್ರೀ ಕೇಶವಜೋಗಿತ್ತಾಯರ ನೆರವನ್ನೂ ಪಡಕೊಳ್ಳಲಾಗಿದೆ. ಯಾತ್ರಿಕರ ವಿಳಾಸವನ್ನು ಪಡೆಯುವಲ್ಲಿ ಶ್ರೀ ಬೆಳಿರಂಗಪ್ಪ ಸುಧೀಂದ್ರ ಇವರು ಸಹಕರಿಸಿರುವರು. ಈ ಮೂವರ ನೆರವನ್ನು ಮರೆಯುವಂತಿಲ್ಲ.

● ಶಿವಮೊಗ್ಗದ ಶ್ರೀ ಟಿ. ಕೆ. ರಾಘವೇಂದ್ರರಾವ್ 'ಪಾವನಯಾತ್ರೆ'ಯಲ್ಲಿ ಪಾಲ್ಗೊಳ್ಳಬೇಕೆಂದು ಸಂಕಲ್ಪಿಸಿದ್ದರು. ಆದರೆ ಅನಾರೋಗ್ಯ ಪ್ರಯುಕ್ತ ಯಾತ್ರೆಯಲ್ಲಿ ಪಾಲ್ಗೊಳ್ಳಲಾಗದೆ, ಯಾತ್ರೆಗಾಗಿ ಕಳುಹಿಸಿದ ಸಹಸ್ರ ರೂ.ಗಳನ್ನು ಪರವಿದ್ಯಾ ಪ್ರಕಾಶನದ ಪ್ರಕಟಣೆಗಾಗಿ ವಿನಿಯೋಗಿಸಲು ನೀಡಿರುವರು. ಆ ಮೊತ್ತವನ್ನು ಈ ಪ್ರಕಟಣೆಗಾಗಿಯೇ ಉಪಯೋಗಿಸಿಕೊಳ್ಳಲಾಗಿದೆ. ಇದರಿಂದ ಶ್ರೀ ಟಿ. ಕೆ. ರಾಘವೇಂದ್ರರಾವ್ ಇವರಿಗೆ ಯಾತ್ರೆಯನ್ನು ನಡೆಸಿದ ಪುಣ್ಯದ ಜೊತೆಗೆ ಆರೋಗ್ಯಭಾಗ್ಯವೂ ದೊರಕುವಂತಾಗಲಿ. ಅಲ್ಲದೆ, ಅವರು ಅಪೇಕ್ಷಿಸಿರುವಂತೆ ಅವರ ತೀರ್ಥರೂಪ ಶ್ರೀ ಟಿ. ಜೆ. ಕೃಷ್ಣಮೂರ್ತಿರಾವ್ ಮತ್ತು ಮಾತೃಶ್ರೀ ಕೃಷ್ಣವೇಣಮ್ಮ—ಇವರಿಗೂ ಆನಂದಾತಿಶಯ ಲಭಿಸುವಂತಾಗಲಿ.

● ಅಚ್ಚುಕಟ್ಟಾಗಿ ಮುದ್ರಿಸಿದ ಸುಗುಣಾ ಪ್ರಿಂಟರ್ಸ್ ಇದರ ಬಳಗದವರಿಗೂ ವಂದನೆಗಳು.

ಸಗ್ರಿ ರಾಘವೇಂದ್ರ ಉಪಾಧ್ಯಾಯ

ಧಾತೃ ಸಂ। ಭಾದ್ರಪದ ಶುಕ್ಲ ಪೂರ್ಣಿಮಾ — ಪರವಿದ್ಯಾ ಪ್ರಕಾಶನ, ಉಡುಪಿ.

# ಆಶೀರ್ವಾದ

ದಕ್ಷಿಣ ಕನ್ನಡದ ಮಣ್ಣಿನ ಪುಣ್ಯ ಅತ್ಯಮೂಲ್ಯ. ಈ ನಾಡಿನ ಭಾಗ್ಯ ಬಣ್ಣಿಸಲಶಕ್ಯ. ಶ್ರೀ ರಾಮ ಕೃಷ್ಣ ಮೊದಲಾದ ದೇವರ ಅವತಾರಗಳಿಗೆ ತಾಣ ವೆಂಬ ಖ್ಯಾತಿ ಉತ್ತರ ಭಾರತಕ್ಕೆ. ಆದರೆ ದೇವರ ಸರಿಯಾದ ಅರಿವನ್ನು ಜಗತ್ತಿ ಗಿತ್ತ ಶ್ರೀ ಜಗದ್ಗುರುಗಳ ಪರಮಪವಿತ್ರ ಕೇಂದ್ರ ಅನ್ನುವ ಹೆಗ್ಗಳಿಕೆ ಈ ಜಿಲ್ಲೆ ಯದ್ದು. ಗಂಗಾದಿ ತೀರ್ಥಗಳ ಜನಕವೆಂಬ ಪ್ರಸಿದ್ಧಿ ಉತ್ತರದ ಭೂಮಿಗೆ. ಶ್ರೀಮದಾಚಾರ್ಯರ ದರ್ಶನ – ಸ್ಪರ್ಶನ – ಅವಗಾಹನ – ಪ್ರಚಾರಗಳಿಂದಲೇ ಅನ್ವರ್ಥನಾಮ ಪಡೆದ ಆ ಗಂಗಾದಿ ತೀರ್ಥಗಳಿಂದಲೂ ಸಹಸ್ರ ಸಹಸ್ರ ಪಾಲು ಅತ್ಯುತ್ತಮವಾದ ಜ್ಞಾನತೀರ್ಥದ ತವರೂರು ಅನ್ನುವ ಹೆಮ್ಮೆ ಈ ಮಣ್ಣಿನ ಭೂಮಿಗೆ. ವೇಗವಾಗಿ ಹರಿಯುವ ಗಂಗಾ ಪ್ರವಾಹವನ್ನು ಸ್ತಂಭನಗೊಳಿಸಿದ ಪವಾಡ ಶ್ರೀಮದಾಚಾರ್ಯರದ್ದು. ಅದಕ್ಕಿಂತಲೂ ದಿವ್ಯ ಪವಾಡ ದೇಶವ್ಯಾಪಿ ಯಾದ ದುರ್ಮತಗಳ ದುರ್ಮತೀಯ ಪ್ರವಾಹವನ್ನು ಸ್ತಂಭನ ಮಾಡಿದ್ದು.

ತತ್ವಜ್ಞಾನದ ಅಮೃತವರ್ಷಣೆ ಮಾಡುತ್ತ ನಮ್ಮ ಜಿಲ್ಲೆಯ ಉದ್ದಗಲಕ್ಕೂ ದಿಗ್ವಿಜಯ ಮಾಡಿದ ಕೀರ್ತಿ ಶ್ರೀಮದಾಚಾರ್ಯರಿಗೆ ಸಲ್ಲತಕ್ಕದ್ದು. ಇಂತಹ ಸುಮಧ್ವವಿಜಯೋತ್ಸವದ ಭವ್ಯ ಪರ್ವಕಾಲದಲ್ಲಿಯೇ ತ್ರಿವಿಕ್ರಮ ಪಂಡಿತರಂತಹ ಕೆಸರಿನಲ್ಲಿ ಮುಳುಗಿದ್ದ ರತ್ನಗಳ ಪ್ರಕಾಶ ಜಗತ್ತಿಗೆ ಲಭಿಸಿದ್ದು.

"ಶತಸಂಖ್ಯಾಃ ಶತಸಂಖ್ಯಮನ್ವಗಚ್ಛನ್" ಎಂಬುದಾಗಿ ಶ್ರೀಮಧ್ವವಿಜಯ ಉಲ್ಲೇಖಿಸಿದಂತೆ ಶ್ರೀ ಪೂರ್ಣಪ್ರಜ್ಞರ ಜೊತೆಗೆ ನೂರಾರು ಶಿಷ್ಯರು ಚೈತ್ರಯಾತ್ರೆ ಯಲ್ಲಿ ಪಾಲ್ಗೊಂಡಿದ್ದರು. ಅದೇ ರೀತಿ ನಮ್ಮ ಯಾತ್ರೆಯಲ್ಲಿಯೂ ನೂರು ಭಗವದ್ಭಕ್ತರು ಭಾಗವಹಿಸಿದ್ದರು. ನಮ್ಮ ಶತಸಂಖ್ಯರು ಶತಸಂಖ್ಯರಾದ ಶ್ರೀ ಮಧ್ವರ ಪೂರ್ಣ ಅನುಗ್ರಹ ಪಾತ್ರರಾದ ನಮ್ಮ ಗುರುಗಳು. ಈ ಇಳಿವಯಸ್ಸಿ ನಲ್ಲಿ ಸಂಪೂರ್ಣವಾಗಿ ಸಕ್ರಿಯವಾಗಿ ನಮ್ಮೊಟ್ಟಿಗಿದ್ದದ್ದು ಶ್ರೀಮದಾಚಾರ್ಯರ ಅನುಗ್ರಹರಕ್ಷೆ ನಮ್ಮ ಯಾತ್ರೆಗಿತ್ತು ಎನ್ನುವುದಕ್ಕೆ ಉಜ್ವಲ ನಿದರ್ಶನ.

ವಿಶ್ವವ್ಯಾಪಿಯಾದ ಶ್ರೀ ವಿಶ್ವೇಶತೀರ್ಥರು ಭಾಗವಹಿಸಿ ಈ ಯಾತ್ರೆಗೆ ಪೂರ್ಣ ಕಳೆ ತುಂಬಿಸಿದರು. ಪಾಠಪ್ರವಚನವನ್ನು ಉಸಿರಾಗಿಸಿಕೊಂಡ ಶ್ರೀ ಮಧ್ವರ ನಡೆನುಡಿಗಳನ್ನು ಮನಮುಟ್ಟುವ ಪ್ರಭಾವಶಾಲಿ ವಾಗ್ವೈಖರಿಯ ಪ್ರಭಂಜನಾಚಾರ್ಯರ ಸಕ್ರಿಯ ಪಾಲ್ಗೊಳ್ಳುವಿಕೆ ಈ ಯಾತ್ರೆಯ ಯಶಸ್ಸಿನ

ಗುಟ್ಟು. ಈ ಯಾತ್ರೆಯನ್ನು ಅಜರಾಮರಗೊಳಿಸಿ, ಈ ಜಾಗವನ್ನು ಕೇಳಿಕಂಡರಿಯದ ಅನಂತ ಜನತೆಯು ಕಿವಿಮನ ತಣಿಸಲೋಸುಗ ಶ್ರೀ ಮಧ್ವರ ವಿಶೇಷ ಸೇವೆಗಾಗಿ ಕಟಿಬದ್ಧ ಯುವ ಮೊನಚು ಲೇಖನಿಯ ಶ್ರೀ ಸಗ್ರಿ ರಾಘವೇಂದ್ರ ಉಪಾಧ್ಯಾಯರ ತೆರೆಯ ಮರೆಯ ನಿರ್ದೇಶನ ಅವಿಸ್ಮರಣೀಯ.

ತಿರುಪತಿ ತಿಮ್ಮಪ್ಪನ ಸನ್ನಿಧಾನದಲ್ಲಿ ಸುಧಾರಣೆಯ ಹರಿಕಾರರಾದ ಕ್ರಾಂತಿಕಾರಕ ತತ್ವಜ್ಞಾನದ ಅಚ್ಚಿನ್ನ ಭಕ್ತರಾದ ಪಿ. ವಿ. ಆರ್. ಕೆ. ಪ್ರಸಾದ್ ಭಾಗವಹಿಸಿದ್ದು ಯಾತ್ರಿಕರ ಸ್ಫೂರ್ತಿಯನ್ನು ಇಮ್ಮಡಿಗೊಳಿಸಿತು. ಇಂತಹ ನಿಷ್ಠಾವಂತ ನೂರಾರು ಮಾಧ್ವಭಕ್ತರು ಭಾಗವಹಿಸಿದ್ದರಿಂದ ಈ ಯಾತ್ರೆ ಸಾರ್ಥಕವಾಯಿತು.

ಈ ಯಾತ್ರೆ ನಮ್ಮ ಹಲವಾರು ದಕ್ಷಿಣ ಉತ್ತರ ಭಾರತ ಯಾತ್ರೆಗಳಿಗಿಂತ ಹೆಚ್ಚು ಪ್ರಭಾವ ಬೀರಿದೆ. ಇಂತಹ ನಿರಂತರ ಯಾತ್ರೆಗಳಿಂದ "ದೀಪದಡಿ ಕತ್ತಲೆ" ಅನ್ನುವ ಗಾದೆಯಂತೆ ಆಚಾರ್ಯರ ಠಾಣದಲ್ಲಿಯೇ ಅಜ್ಞಾನದ ಕತ್ತಲೆ ಕವಿದಿದೆ ಅನ್ನುವ ಮಾತು ಸದ್ಯೋಭವಿಷ್ಯದಲ್ಲಿಯೇ ಸುಳ್ಳಾಗಲಿದೆ ಅನ್ನುವ ಆಶಾಕಿರಣ ಮೂಡಿದೆ.

ಸಮಗ್ರ ಮಾಧ್ವಜನತೆ ಈ ಪವಿತ್ರ ಸ್ಥಳಗಳ ಯಾತ್ರೆಯನ್ನು ಕಡ್ಡಾಯವಾಗಿ ಮಾಡುವಂತಾಗಲಿಯೆಂದು ಶ್ರೀ ಮಧ್ವಪತಿಯಲ್ಲಿ ಪ್ರಾರ್ಥಿಸುತ್ತೇವೆ.

ಧಾತೃ ಸಂ|ರದ
ಅನಂತ ಚತುರ್ದಶಿ

ಶ್ರೀ ವಿದ್ಯಾಧೀಶ ತೀರ್ಥರು
ಪಲಿಮಾರು ಮಠ (ಕಿರಿಯ ಪಟ್ಟ) ಉಡುಪಿ

# ಪಾವನ ಯಾತ್ರೆ-ಒಂದು ಸ್ಥೂಲ ವರದಿ

ಡಾ। ಪ್ರಭಂಜನಾಚಾರ್ಯರ ಸೂಚನೆಯ ಮೇರೆಗೆ ಉಡುಪಿ ಪಲಿಮಾರು ಮಠದ ಶ್ರೀ ವಿದ್ಯಾಧೀಶತೀರ್ಥರ ನೇತೃತ್ವದಲ್ಲಿ 6-4-96ರಿಂದ 12-4-96ರ ವರೆಗಿನ ಸಪ್ತಾಹಾವಧಿಯಲ್ಲಿ ಡಿಲ್ಲಿ, ಬೆಂಗಳೂರು, ಧಾರವಾಡ, ಮದ್ರಾಸ್, ಗುಲ್ಬರ್ಗಾ ಹಾಗೂ ಉಡುಪಿಯ ಸುಮಾರು ನೂರು ಮಂದಿ ಸಾಧಕರ ಜೊತೆಗಾರಿಕೆಯಲ್ಲಿ ನಡೆದ 'ಪಾವನ ಯಾತ್ರೆ'ಯ ವರದಿ ಯಾತ್ರೆಯಲ್ಲಿ ಪಾಲ್ಗೊಂಡ ಯಾತ್ರಿಕರಿಗೆ ಮತ್ತೆ ಮತ್ತೆ ಸ್ಮರಿಸಿಕೊಳ್ಳಲು, ಮೆಲುಕು ಹಾಕಲು ಉಪಯುಕ್ತವೆನಿಸಿದರೆ ಉಳಿದ ಸಾಧಕರಿಗೂ ಆ ನಿಟ್ಟಿನಲ್ಲಿ ಸ್ಫೂರ್ತಿಯನ್ನು ಉಂಟುಮಾಡುವುದರಲ್ಲಿ ಹಾಗೂ ತಾವೂ ಪಾಲ್ಗೊಳ್ಳಬೇಕಿತ್ತೆಂಬ ಪಶ್ಚಾತ್ತಾಪಕ್ಕೊಳಗಾಗಿ ಮುಂದೆ ಎಂದೂ ಇಂತಹ ಸುಸಂದರ್ಭಗಳಿಂದ ವಂಚಿತರಾಗದಿರುವುದಕ್ಕೆ ಬೇಕಾದ ಎಚ್ಚರವನ್ನು ನೀಡುವಲ್ಲಿ ಉಪಯುಕ್ತವೆನಿಸಬಲ್ಲದು. ಅಲ್ಲದೆ, ಮುಂದೆ ಎಂದಾದರೂ ಇಂತಹ ಯಾತ್ರೆಯನ್ನು ಸಂಯೋಜಿಸುವುದಿದ್ದರೆ ಲೋಪದೋಷಗಳು ಬಾರದಂತೆ ಮುನ್ನೆಚ್ಚರಿಕೆ ಕೈಗೊಳ್ಳುವಲ್ಲಿಯೂ ಇದು ಸಹಕಾರಿಯಾಗಬಲ್ಲದು.

**ಯಶಸ್ಸಿನ ಸೂಚನೆ :**

ಪಲಿಮಾರು ಮಠದ ಹಿರಿಯ ಶ್ರೀಪಾದರಾದ ಶ್ರೀ ವಿದ್ಯಾಮಾನ್ಯತೀರ್ಥರಿಂದ ಈ ಯಾತ್ರೆಯ ಉದ್ಘಾಟನೆ ನಡೆಸಬೇಕೆಂದು ಗೊತ್ತುಪಡಿಸಲಾಗಿತ್ತು. ಉದ್ಘಾಟನೆಗಾಗಿ ಬಂದ ಶ್ರೀಪಾದರು ಯಾತ್ರಿಕರ ಶ್ರದ್ಧೆ, ಹುರುಪುಗಳನ್ನು ಕಂಡು ತಾವೂ ಈ ಯಾತ್ರೆಯಲ್ಲಿ ಸಮಗ್ರವಾಗಿ ಪಾಲ್ಗೊಳ್ಳುವುದಾಗಿ ತಿಳಿಸಿದರು. ಇದರಿಂದಾಗಿ ಪ್ರಾರಂಭದಲ್ಲಿಯೇ ಯಾತ್ರೆಗೆ ಯಶಸ್ಸಿನ ಸೂಚನೆ ದೊರಕಿದಂತಾಯಿತು. ಭಾವುಕ ಯಾತ್ರಿಕರಿಗೆ ಹಿರಿಯ ಶ್ರೀಪಾದರೂ ತಮ್ಮ ಜೊತೆಗೆ ಬರುವರೆಂಬ ಸಿಹಿ ಸುದ್ದಿಯನ್ನು ಕೇಳಿ ಹಿಗ್ಗೋ ಹಿಗ್ಗು.

**ಶ್ರೀ ಮಧ್ವರು ಹೊರಟಲ್ಲಿಂದಲೇ**
**ಯಾತ್ರೆಯ ಪ್ರಸ್ಥಾನ**

ಆಚಾರ್ಯರ ಚರಿತ್ರೆಯಲ್ಲಿ ದಾರ್ಢ್ಯವನ್ನುಂಟು ಮಾಡುವುದರಲ್ಲಿ ಈ ಯಾತ್ರೆ ಯಶಸ್ವಿಯಾಗಲೆಂದು ಹಾರೈಸುತ್ತ, ಪಲಿಮಾರು ಮಠದ ಶ್ರೀ ವಿದ್ಯಾಮಾನ್ಯತೀರ್ಥರು ಉಡುಪಿ ಅನಂತಾಸನನ ಸನ್ನಿಧಾನದಲ್ಲಿ ದೀಪ ಬೆಳಗಿಸಿ ಈ ಯಾತ್ರೆಯನ್ನು ಉದ್ಘಾಟಿಸಿದರು.

'ನಾಸ್ಮದುಕ್ತಿಸದೃಶಂ ಹಿತರೂಪಂ........' —ನಮ್ಮ ಮಾತಿಗೆ ಸದೃಶವಾದ ಹಿತಕಾರಿ ಇನ್ನೊಂದಿಲ್ಲ—ಎಂದಿರುವ ಶ್ರೀಮದಾಚಾರ್ಯರ ಸರ್ವಮೂಲ ಗ್ರಂಥ ಗಳಲ್ಲಿ ಪ್ರತಿಯೊಂದೂ ಪರಿಪೂರ್ಣ: ಸಾಧಕರಿಗೆ ಹಿತಕಾರಿ—ಎಂದ ಪಲಿಮಾರು ಮಠದ ಶ್ರೀ ವಿದ್ಯಾಧೀಶತೀರ್ಥರು ಯಾತ್ರೆಯ ಅವಧಿಯಲ್ಲಿ ತಾವು ಪ್ರವಚನ ಮಾಡಬೇಕೆಂದು ಸಂಕಲ್ಪಿಸಿದ ಆಚಾರ್ಯರ 'ಮಹಾಭಾರತ ತಾತ್ಪರ್ಯ' ಗ್ರಂಥ ಬರೇ 81 ಪದ್ಯಗಳನ್ನೊಳಗೊಂಡ ಪುಟ್ಟ ಕೃತಿಯಾದರೂ ಸಮಗ್ರ ಮಹಾಭಾರತ ದ ತಾತ್ಪರ್ಯವನ್ನೇ ತೋರಿಸಿಕೊಡುವ, ವಿಶ್ವವಿಸ್ಮಯಕರ ಗ್ರಂಥವೆಂದು ನಾರಾಯಣ ಪಂಡಿತರಿಂದ ಹೊಗಳಲ್ಪಟ್ಟ ಅದ್ಭುತವಾದ ಗ್ರಂಥವೆಂದು ಆ ಗ್ರಂಥದ ವೈಶಿಷ್ಟ್ಯವನ್ನು ತಿಳಿಸಿದರು.

ಉಡುಪಿ ಅನಂತಾಸನನ ಸನ್ನಿಧಿಯಲ್ಲಿ ಯಾತ್ರೆಯ ಉದ್ಘಾಟನೆ ನಡೆದುದರ ಔಚಿತ್ಯವನ್ನು ವಿವರಿಸುತ್ತ ಶ್ರೀ ಪ್ರಭಂಜನಾಚಾರ್ಯರು ಮಧ್ವಾವತಾರದಲ್ಲಿ ವಾಯುದೇವರು ಮೊದಲು ಅನಂತಾಸನನ ಸನ್ನಿಧಿಗೆ ಬಂದು, ಅಲ್ಲಿಂದ ಪಾಜಕಕ್ಕೆ ಹೋಗಿ ಅಲ್ಲಿ ಮಧ್ವರಾಗಿ ಅವತರಿಸಿರುವುದಕ್ಕೆ ಅನುಗುಣವಾಗಿ ಪ್ರಕೃತ ಯಾತ್ರೆ ಅನಂತಾಸನನ ಸನ್ನಿಧಿಯಿಂದ ಪಾಜಕದತ್ತ ಹೊರಟಿರುವುದು ಸಮುಚಿತವಾದು ದೆಂದು ಪ್ರತಿಪಾದಿಸಿದರು.

## ಪಾಜಕದಲ್ಲಿ ಅವಸರದ ಸಂದರ್ಶನ

ಹೀಗೆ ನಿಗದಿಪಡಿಸಲಾದ ಸಮಯಕ್ಕಿಂತ ಎರಡು ಗಂಟೆ ವಿಳಂಬವಾಗಿ ಯಾತ್ರೆಯ ಉದ್ಘಾಟನೆ ನಡೆಯುವಂತಾದರೂ ಸಾಕಷ್ಟು ವೈಶಿಷ್ಟ್ಯಪೂರ್ಣವಾಗಿ ನಡೆದು, ಅಲ್ಲಿಂದ ಪಾಜಕಕ್ಕೆ ತಲುಪುವಾಗ 11 ಗಂಟೆಯ ಮಧ್ಯಾಹ್ನ. ಪಾಜಕ ಕ್ಷೇತ್ರದಲ್ಲಿ ಶ್ರೀ ವಾದಿರಾಜ ಪ್ರತಿಷ್ಠಿತ ಶ್ರೀ ಮಧ್ವರ ಸಮ್ಮುಖದಲ್ಲಿ ಪ್ರವಚನ ಗಳು ನಡೆದವು. ಶ್ರೀ ವಿದ್ಯಾಮಾನ್ಯತೀರ್ಥರು ಗಂಗಾಸ್ನಾನ ನಡೆಸಲು ತಮಗೆ ಆಗದಿರುವ ಬಗ್ಗೆ ದೇವರಲ್ಲಿ ಕೇಳಿಕೊಳ್ಳಲು ಶ್ರೀಮದಾಚಾರ್ಯರ ಸನ್ನಿಧಾನಾತಿ ಶಯವುಳ್ಳ ಪಾಜಕದ ಸಂದರ್ಶನದಿಂದ ಗಂಗಾಸ್ನಾನಕ್ಕಿಂತಲೂ ಅಧಿಕ ಪುಣ್ಯದ ಪ್ರಾಪ್ತಿಯ ಸಂದೇಶದ ಸೂಚನೆ ತಮಗೆ ದೊರಕಿದೆ ಎಂದು ತಿಳಿಸಿ, ಆದ್ದರಿಂದ ಆಚಾರ್ಯರ ಸನ್ನಿಧಾನಾತಿಶಯವುಳ್ಳ ಕ್ಷೇತ್ರಗಳ ಸಂದರ್ಶನದಿಂದ ಗಂಗಾಸ್ನಾನ ಕ್ಕಿಂತಲೂ ಹೆಚ್ಚಿನ ಪುಣ್ಯ ದೊರಕುವುದೆಂದು ಪ್ರತಿಪಾದಿಸಿದರು.

ಶ್ರೀ ಪ್ರಭಂಜನಾಚಾರ್ಯರು ಸುಮಧ್ವವಿಜಯ ಮತ್ತು ಸಂಪ್ರದಾಯ ಪದ್ಧತಿಗಳಲ್ಲಿ ಬಂದಿರುವಂತೆ ಪಾಜಕದಲ್ಲಿರುವ ಆಚಾರ್ಯರ ಲೀಲೆಗಳ ಮಹಿಮೆ ಗಳ ಸ್ಮಾರಕಗಳನ್ನು ವಿವರಿಸಿದರು.

ಆಚಾರ್ಯರ ಹಿರಿಯರು ವಾಸವಾಗಿದ್ದ ಮನೆ, ಅಲ್ಲಿ ಆರಾಧ್ಯನಾಗುತ್ತಿರುವ ಅನಂತಾಸನ, ಆಚಾರ್ಯರ ಅಕ್ಷರಾಭ್ಯಾಸದ ಶಿಲೆ, ಹಾಲಿನ ಭಾಂಡೆಗೆ ಮುಚ್ಚಿದ ಶಿಲೆ, ಆಚಾರ್ಯರು ವಾಸುದೇವನಾಗಿದ್ದಾಗ ನಿರ್ಮಿಸಿದ 'ವಾಸುದೇವತೀರ್ಥ' ಇವುಗಳೆಲ್ಲದರ ಸಂದರ್ಶನ ನಡೆಸಿದ್ದಾಯಿತು. ವಾಸುದೇವ ತೀರ್ಥದಲ್ಲಿ ಕೆಲವರು ಮಿಂದರು; ಮತ್ತೆ ಕೆಲವರು ಪ್ರೋಕ್ಷಿಸಿಕೊಂಡರು.

ಹಾವಿನ ರೂಪದಲ್ಲಿ ಬಂದಿದ್ದ ಮಣಿಮಂತ ಆಸುರನನ್ನು ವಾಸುದೇವ ಪಾದದಿಂದ ಚಚ್ಚಿ ಸಂಹರಿಸಿದ ಸ್ಥಳದಲ್ಲಿ ಶಿಲೆಯಲ್ಲಿ ಮೂಡಿರುವ ಹೆಡೆಯ ಗುರುತನ್ನು ಕಂಡು, ಮುಂದೆ ಪರಶುರಾಮ ಬೆಟ್ಟವನ್ನು ಹತ್ತಿ ಪರಶುರಾಮನ ದರ್ಶನ ಪಡೆದದ್ದಾಯಿತು. ಅರ್ಚಕರಿಗೆ ಯಾತ್ರಿಕರು ಬರುವ ಸುದ್ದಿಯನ್ನು ಮೊದಲೇ ತಿಳಿಸಿದ್ದರಿಂದ ಪರಶುರಾಮನ ಗುಡಿಯ ಬಾಗಿಲು ತೆರೆದೇ ಇತ್ತು.

ಪರಶುರಾಮನ ದರ್ಶನ ಪಡೆದು, ಪರಶುರಾಮನಿಂದ ಪ್ರತಿಷ್ಠಿತಳಾದ ದುರ್ಗಾದೇವಿಯ ಸಂದರ್ಶನ

ಹೀಗೆ ಸುಮಾರು ಒಂದು ಗಂಟೆಯ ಅವಧಿಯಲ್ಲಿ ಅವಸರ ಅವಸರವಾಗಿ ಪಾಜಕದ ಸಂದರ್ಶನವನ್ನು ಪೂರೈಸಿ ದಂಡತೀರ್ಥಕ್ಕೆ ಹೋಗಲಾಯಿತು. ದಂಡ ತೀರ್ಥದಲ್ಲಿ ಕೆಲವರು ಮಿಂದರು; ಕೆಲವರು ಪ್ರೋಕ್ಷಿಸಿಕೊಂಡರು.

## 'ಯಮಕ ಭಾರತ'ದ ವಿತರಣೆ

ಮಧ್ಯಾಹ್ನ ಭೋಜನದ ಬಳಿಕ ದಂಡತೀರ್ಥ ಮಠದ ಹೊರಾಂಗಣದಲ್ಲಿ ಪ್ರವಚನಕ್ಕೆ ಏರ್ಪಾಟನ್ನು ನಡೆಸಲಾಯಿತು.

ಶ್ರೀ ಪ್ರಭಂಜನಾಚಾರ್ಯರು ತಮ್ಮ ಪ್ರವಚನದಲ್ಲಿ ಶ್ರೀಕೃಷ್ಣ ಲೋಕ ಸಂಗ್ರಹಕ್ಕಾಗಿ ಸಾಂದೀಪಿನಿ ಆಚಾರ್ಯರಲ್ಲಿ ಇದ್ದುಕೊಂಡು ಅಧ್ಯಯನ ನಡೆಸಿದಂತೆ ಆಚಾರ್ಯರೂ ವಾಸುದೇವನಾಗಿದ್ದಾಗ ದಂಡತೀರ್ಥದಲ್ಲಿ ತೋಟಂತಿಲ್ಲಾಯರ ಬಳಿ ಸುಮಾರು ಮೂರು ವರ್ಷ ಕಾಲ ಇದ್ದು ಅಧ್ಯಯನ ನಡೆಸಿದ ವಿಚಾರವನ್ನು ವಿವರಿಸಿದರು. ಇಲ್ಲಿಯ ಕೆರೆಯ ನೀರನ್ನು ದಂಡದಿಂದ ಹೊಲಕ್ಕೆ ಹರಿಯುವಂತೆ ಮಾಡಿದ್ದ ವಾಸುದೇವನ ಲೀಲೆಯನ್ನು ಉಲ್ಲೇಖಿಸಿದ ಆಚಾರ್ಯರು ಶ್ರೀಮದಾಚಾರ್ಯರಿಂದ ಮೂರು ದಂಡತೀರ್ಥಗಳು ನಿರ್ಮಿತಗಳಾಗಿದ್ದು ಅವುಗಳಲ್ಲಿ ಒಂದು ಪಾಜಕದಲ್ಲಿ ಮತ್ತೊಂದು ದಂಡತೀರ್ಥದಲ್ಲಿ, ಇನ್ನೊಂದು 'ಶ್ರೀ ಮುಷ್ಣಮ್' ನಲ್ಲಿ ಇದೆ ಎಂದು ತಿಳಿಸಿದರು.

ಯಮಕಭಾರತದ ಮೊದಲ ಪದ್ಯದ ವಿವರಣೆಯನ್ನು ನೀಡಿದ ಶ್ರೀ ವಿದ್ಯಾಧೀಶತೀರ್ಥರು ಶುದ್ಧವಾದ ಆನಂದ ಬೇಕೆಂದರೆ, ಅಂತಹ ಆನಂದ ಸ್ವರೂಪಿ

ಯಾದ ಮಾಧವನನ್ನು ಧ್ಯಾನಿಸಬೇಕೆಂದು ಸಂದೇಶಿಸಿದರು.

ಶ್ರೀ ವಿದ್ಯಾಧೀಶತೀರ್ಥರು ಕನ್ನಡದಲ್ಲಿ ಅನುವಾದಿಸಿದ ಯಮಕಭಾರತದ ಪುಸ್ತಕವನ್ನು ಶ್ರೀ ವಿದ್ಯಾಮಾನ್ಯತೀರ್ಥರು ಯಾತ್ರೆಯಲ್ಲಿ ಪಾಲ್ಗೊಳ್ಳಲಿದ್ದ ಪ್ರತಿಯೊಬ್ಬ ಜಿಜ್ಞಾಸುವಿಗೂ ಅನುಗ್ರಹಪೂರ್ವಕವಾಗಿ ವಿತರಿಸಿದರು.

## ಪಾಂಗಾಳದ ಕಟ್ಟೆ ಮತ್ತು ಸಂದಳಿಕೆ ಪಾಡಿ

ದಂಡತೀರ್ಥದಿಂದ ಬನ್ನಂಜೆ ಮಹಾಲಿಂಗೇಶ್ವರ ದೇವಾಲಯಕ್ಕೆ ಬರುವ' ದಾರಿಯಲ್ಲಿ ಆಚಾರ್ಯರ ಸಂಪರ್ಕಕ್ಕೊಳಗಾದದ್ದೆಂದು ನಂಬಲಾದ ಎರಡು ಸ್ಥಳಗಳಿಗೆ ಭೇಟಿ ನೀಡಲಾಯಿತು. ಪಾಂಗಾಳದ ಜನಾರ್ದನ ದೇವಾಲಯಕ್ಕಿಂತ ಸುಮಾರು ಒಂದು ಫರ್ಲಾಂಗ್ ದೂರದಲ್ಲಿರುವ ಒಂದು ಕಟ್ಟೆ. 'ಜನಾರ್ದನ ಮೊದಲು ಅಲ್ಲಿದ್ದು. ವಾಸುದೇವ ಪಾಜಕದಿಂದ ದಂಡತೀರ್ಥಕ್ಕೆ ಹೋಗುವ ದಾರಿಯಲ್ಲಿ ಅಲ್ಲಿಯ ಜನಾರ್ದನನಿಗೆ ನಮಸ್ಕರಿಸಿ ಮುಂದುವರಿಯುತ್ತಿದ್ದನು. ಹೀಗೆ ವಾಸುದೇವನ ಸಂಪರ್ಕಕ್ಕೊಳಗಾದದ್ದು ಈ ಕಟ್ಟೆ ಎಂದು ಜನಾರ್ದನ ದೇವಾಲಯದ ಶ್ರೀ ವಿಠಲ ಭಟ್ಟರು ಪರಿಚಯಿಸಿ ಕೊಟ್ಟರು. ಸುತ್ತಮುತ್ತ ಮರಗಿಡಗಳನ್ನು ಕಡಿಯದೆ ಆ ಸ್ಥಳಕ್ಕೆ ಗೌರವವನ್ನು ಸಲ್ಲಿಸಲಾಗುತ್ತಿದೆ.

ಅಲ್ಲಿಂದ ಕುಕ್ಕಿಕಟ್ಟೆಯ ಸಂದಳಿಕೆ ಪಾಡಿಯ ಭೂತದ ಕೊಟ್ಟಿಗೆಗೆ ಭೇಟಿ ನೀಡಲಾಯಿತು. ಬಹಿರ್ನಿಷ್ಕ್ರಮಣದಂದು ಉಡುಪಿ ಅನಂತಾಸನನಿಗೆ ಸಮರ್ಪಿಸಲ್ಪಟ್ಟಿದ್ದ ಶಿಶು ರೂಪದ ಮಧ್ವರನ್ನು ಹಿಡಿದುಕೊಂಡು ಪಾಜಕಕ್ಕೆ ಮರಳುತ್ತಿದ್ದಾಗ ರಾತ್ರಿ ಕಾಲ ಇದೇ ಸ್ಥಳದಲ್ಲಿ ಒಬ್ಬ ವ್ಯಕ್ತಿಯಲ್ಲಿ ಆವೇಶಗೊಂಡ ಭೂತ 'ಲೋಕಪಾಲಕ ಬಾಲಕನಾಗಿ ನಿಮ್ಮ ಜೊತೆ ಇರುವುದರಿಂದ ಉಳಿದುಕೊಂಡಿರಿ; ಇಲ್ಲದಿದ್ದಲ್ಲಿ ರಾತ್ರಿ ಕಾಲದಲ್ಲಿ ಬಂದ ನಿಮ್ಮನ್ನೆಲ್ಲ ಮುಗಿಸುತ್ತಿದ್ದೆ' ಎಂದು ನಡೆಸಿದ 'ವಾಯುಸ್ತುತಿ'ಯನ್ನು ಅಲ್ಲಿ ವಿವರಿಸಿದ ಶ್ರೀ ಪ್ರಭಂಜನಾಚಾರ್ಯರು ಶ್ರೀ ಮಧ್ವರ ಆಸರೆ ಪಡೆದಿದ್ದ ಅವರಿಗೆಲ್ಲ ಏನೂ ಹಾನಿ ಮಾಡದ ಭೂತ ಅಂತಹ ಮಧ್ವರನ್ನು ನಂಬಿದ ನಮಗೂ ಏನನ್ನೂ ಮಾಡಲಾರದೆಂದು ಆಶ್ವಾಸನೆಯಿತ್ತರು.

## ಮಹಾಲಿಂಗೇಶ್ವರನ ದರ್ಶನ

ಕುಕ್ಕಿಕಟ್ಟೆಯ ಸಂದಳಿಕೆ ಪಾಡಿಯಿಂದ ಬನ್ನಂಜೆ ಮಹಾಲಿಂಗೇಶ್ವರ ದೇವಾಲಯಕ್ಕೆ ಬರುವಾಗ ಸಂಜೆ ಏಳು ಗಂಟೆಯೂ ದಾಟಿತ್ತು. ಆದ್ದರಿಂದ ಅಲ್ಲಿ ಪ್ರವಚನ ನಡೆಸದೆ ಶ್ರೀಮದಾಚಾರ್ಯರ ಸಂದರ್ಶನಕ್ಕೆ ಪಾತ್ರನಾಗಿದ್ದ ಮಹಾಲಿಂಗೇಶ್ವರನ ದರ್ಶನವನ್ನಷ್ಟೇ ಪಡೆದು ಮುಂದುವರಿಯಲಾಯಿತು.

ಕಂಗು ಮಠಕ್ಕೆ ಸಂದರ್ಶನ ನೀಡಬೇಕೆಂದು ಸಂಕಲ್ಪಿಸಿತ್ತಾದರೂ ಕಾಲನಿಯಾ

ಮಠನ ಒತ್ತಡದಿಂದಾಗಿ, ಅದನ್ನು ಬಿಟ್ಟುಬಿಡಬೇಕಾಯಿತು.

## ಸಮುದ್ರತೀರದಲ್ಲೊಂದು 'ಧ್ಯಾನ ಮಂಟಪ'

ಬನ್ನಂಜೆಯಿಂದ ಮಲ್ಪೆಯ ಸಮುದ್ರದ ತೀರಕ್ಕೆ ಗಮನ. ಸಮುದ್ರರಾಜನ ವೈಭವವನ್ನು ಕಣ್ಣುಗಳಿಂದ ನೋಡಲಾಗದ ಸುಮಾರು 8 ಗಂಟೆಯ ರಾತ್ರಿ ಆದಾಗಿತ್ತು. ಸುಮುದ್ರದ ತೆರೆಗಳ ಮೇಲಿಂದ ಹಾದು ಬರುತ್ತಿದ್ದ ತಂಗಾಳಿ ಯನ್ನು ತ್ವಗಿಂದ್ರಿಯದಿಂದಲೂ, ಸಮುದ್ರರಾಜನ ಗರ್ಜನೆಯನ್ನು ಕಿವಿಗಳಿಂದಲೂ ಆಸ್ವಾದಿಸಬಹುದಾಗಿತ್ತಷ್ಟೇ.

ಆ ಕತ್ತಲೆಯಲ್ಲೂ ಸಮುದ್ರರಾಜನ ಭೋರ್ಗರೆತದ ನಡುವೆಯೂ ಪ್ರವಚನ ನಡೆಯಿತು. ಗೋಪೀಚಂದನದೊಳಗೆ ಸೇರಿಕೊಂಡು ದ್ವಾರಕೆಯಿಂದ ಬಂದ ಶ್ರೀಕೃಷ್ಣನನ್ನು ಶ್ರೀ ಮಧ್ವರು ಬರಮಾಡಿಕೊಂಡ ಘಟನೆಯನ್ನು ನಿರೂಪಿಸಿದ ಶ್ರೀ ಪ್ರಭಂಜನಾಚಾರ್ಯರು ಅಂತಹ ಶ್ರೀಕೃಷ್ಣನ ಭವ್ಯ ವ್ಯಕ್ತಿತ್ವವನ್ನು ಸಮುದ್ರ ಸಂಕೇತಿಸುತ್ತಿದೆ; ಶ್ರೇಷ್ಠವಾದ ದೇವರ ವ್ಯಕ್ತಿತ್ವದ ಮುಂದೆ ಉಳಿದೆಲ್ಲವುಗಳಿಗೆ ಧಿಕ್ಕಾರ ಸಮುದ್ರದ ತೆರೆಗಳ ಮೊರೆತಗಳಿಂದ ಸಾರಲ್ಪಡುತ್ತಿರುವುದೆಂದು ಆಚಾರ್ಯರು ಪರಿಚಯಿಸಿಕೊಟ್ಟಿರುವುದನ್ನು ಉಲ್ಲೇಖಿಸಿದರು. ಪ್ರಶಾಂತ ವಾತಾವರಣವನ್ನೊಳಗೊಂಡ ಸಮುದ್ರದ ತೀರ ಜಪ, ತಪ, ಧ್ಯಾನಾದಿಗಳ ಅನುಷ್ಠಾನಕ್ಕೆ ಯೋಗ್ಯವಾಗಿರುವಂತಹದ್ದು. ಆದರೆ ಅದನ್ನು ದುರುಪಯೋಗ ಪಡಿಸಿಕೊಳ್ಳುವವರ ಸಮ್ಮರ್ದದಿಂದಾಗಿ ಅದರ ಸದುಪಯೋಗಕ್ಕೆ ಅವಕಾಶ ಇಲ್ಲ ಎಂದಾಗಿದೆ. ಹೀಗಾಗಬಾರದು. ಸಾಧಕರು ಸಮುದ್ರದ ತೀರಕ್ಕೆ ಬಂದು ಜಪ, ಧ್ಯಾನಾದಿಗಳನ್ನು ನಡೆಸವಂತಾಗಬೇಕು—ಎಂದು ತಿಳಿಸಿದ ಶ್ರೀ ವಿದ್ಯಾಧೀಶತೀರ್ಥರು ಆ ಉದ್ದೇಶದಿಂದ ತಮಗೆ ಸಮುದ್ರದ ತೀರದಲ್ಲಿ ಸಮರ್ಪಿಸಲ್ಪಟ್ಟ ಸ್ಥಳದಲ್ಲಿ 'ಧ್ಯಾನಮಂಟಪ'ವನ್ನು ನಿರ್ಮಿಸಲು ಸಂಕಲ್ಪಿಸಿರುವುದನ್ನು ಹೇಳಿದರು.

ದ್ವಾರಕೆಯಿಂದ ಭಕ್ತಿಜ್ಞಾನಗಳ ಆಕರದಂತಿದ್ದ ಶ್ರೀ ಮಧ್ವಾಚಾರ್ಯರು ಇದ್ದ ಉಡುಪಿಗೆ ಆಗಮಿಸಿದ ಶ್ರೀಕೃಷ್ಣ ತಾನು ಭಕ್ತಿಜ್ಞಾನಗಳಿಗೆ ಒಲಿಯುವ ನೆಂದು ಸೂಚಿಸಿರುವುದನ್ನು ಶ್ರೀ ವಿದ್ಯಾಮಾನ್ಯತೀರ್ಥರು ಸಂದೇಶಿಸಿದರು.

## ಮೂರು ರುದ್ರ ಪ್ರತೀಕಗಳ ಉಪಾಸನೆಯ ಸಂದೇಶ

ಕೊಡವೂರು ಶಂಕರನಾರಾಯಣ ದೇವಾಲಯಕ್ಕೆ ಸಂದರ್ಶಿಸುವಾಗ ರಾತ್ರಿ 9 ಗಂಟೆ ಕಳೆದಿತ್ತಾದರೂ ಶ್ರೀಪಾದರನ್ನು ಯಾತ್ರಿಕರನ್ನು ಸಂಭ್ರಮದಿಂದ ಸ್ವಾಗತಿಸಲಾಯಿತು. ದೇವಸ್ಥಾನದ ಅಧಿಕಾರಿಗಳಲ್ಲದೆ ಊರ ಅನೇಕ ಮಹನೀಯ ರೂ, ಮಹಿಳೆಯರೂ ಉತ್ಸಾಹದಿಂದ ನಿರೀಕ್ಷಿಸುತ್ತಿದ್ದರು.

ಶ್ರೀ ಶಂಕರನಾರಾಯಣನ ದರ್ಶನ ಪಡೆದ ಬಳಿಕ ಶ್ರೀ ವಿದ್ಯಾಮಾನ್ಯ ತೀರ್ಥರ ಅಧ್ಯಕ್ಷತೆಯಲ್ಲಿ ಜರಗಿದ ಸಾರ್ವಜನಿಕ ಸಭೆಯಲ್ಲಿ ಶ್ರೀ ಪ್ರಭಂಜನಾ ಚಾರ್ಯರು ಕೊಡವೂರು ಶಂಕರನಾರಾಯಣ ದೇವಾಲಯಕ್ಕೆ ಆಚಾರ್ಯರ ಸಂಪರ್ಕದ ಬಗ್ಗೆ ತಿಳಿಸುತ್ತ, ಆಚಾರ್ಯರು ವಾಸುದೇವನಾಗಿದ್ದಾಗ ಕೊಡವೂರಿನ ಶಂಕರನಾರಾಯಣ, ಬನ್ನಂಜೆಯ ಮಹಾಲಿಂಗೇಶ್ವರ ಹಾಗೂ ಉಡುಪಿಯ ಚಂದ್ರಮೌಳೀಶ್ವರ—ಈ ಮೂರು ರುದ್ರ ಪ್ರತೀಕಗಳಲ್ಲಿ ಉಪಾಸನೆ ನಡೆಸುವುದರ ಮೂಲಕ ಶ್ರವಣ, ಮನನ, ನಿದಿಧ್ಯಾಸನಗಳೆಂಬ ಮೂರು ಸಾಧನೆಗಳಲ್ಲಿ ಪ್ರತಿ ಯೊಂದಕ್ಕೂ ಮನಸ್ಸಿನ ನೆರವು ಅತ್ಯಾವಶ್ಯಕವಾಗಿರುವುದರಿಂದ ಮನೋಭಿಮಾನಿ ಯಾದ ರುದ್ರನನ್ನು ಈ ಮೂರು ಸಾಧನೆಗಳಿಗೂ ಅನುಕೂಲತೆಯನ್ನು ಅನುಗ್ರಹಿ ಸುವಂತೆ ಮೂರು ಹಂತಗಳಲ್ಲಿ ಧ್ಯಾನಿಸಬೇಕೆಂದು ಸಂದೇಶಿಸಿರುವರೆಂದು ಪ್ರತಿ ಪಾದಿಸಿದರು.

ಭಕ್ತನಾದ ರುದ್ರ ಹಾಗೂ ಸ್ವಾಮಿಯಾದ ನಾರಾಯಣ ಇವರೊಳಗೆ ಮಾನಸಿಕವಾಗಿ ಎಷ್ಟೊಂದು ಐಕ್ಯವಿದೆ ಎಂದು ತೋರಿಸುವ ದೇವಾಲಯ ಇದಾ ಗಿದೆ ಎಂದು ಶ್ರೀ ವಿದ್ಯಾಮಾನ್ಯತೀರ್ಥರು ಸಂದೇಶಿಸಿದರು.

ಶ್ರೀ ವಿದ್ಯಾಧೀಶತೀರ್ಥರು ಆ ದಿನದ ಕಾರ್ಯಕ್ರಮಗಳನ್ನು ಪ್ರಸ್ತಾಪಿಸಿ, 'ದೈವಸಂಕಲ್ಪ'ದ ಹಿರಿಮೆಯನ್ನು ಸಾರಿದರು.

## ಕಾಂತೇಶ್ವರ ಸದನದಲ್ಲಿಯೇ ಮಲ್ಲರ ಪರೀಕ್ಷೆ

6–4–96ರಂದು ರಾತ್ರಿ ಕೊಡವೂರಿನ ಶಂಕರನಾರಾಯಣ ದೇವಾಲಯ ದಲ್ಲಿಯೇ ತಂಗಿದ್ದು 7–4–96ರಂದು ಬೆಳಿಗ್ಗೆ ಆಹ್ನೀಕಾದಿಗಳನ್ನು ಪೂರೈಸಿ ಕೊಂಡು ಕಾಂತಾವರದ ಕಾಂತೇಶ್ವರ ದೇವಾಲಯವನ್ನು ಸಂದರ್ಶಿಸಲಾಯಿತು.

ಕಾಂತೇಶ್ವರ ದೇವಾಲಯದ ಹೊರ ಪ್ರಾಂಗಣದಲ್ಲಿ ಶ್ರೀ ಪ್ರಭಂಜನಾ ಚಾರ್ಯರಿಂದ ಪ್ರವಚನ ನಡೆಯಿತು. ಆ ದೇವಾಲಯದ ಧ್ವಜಸ್ತಂಭವನ್ನು ಒಬ್ಬನೇ ಎತ್ತಿ ತಂದಿದ್ದ 'ಗಂಡವಾಟ' ಮತ್ತು ಅವನ ಸಹೋದರ ಆಚಾರ್ಯರ ಬೆರಳನ್ನು ಎತ್ತುವುದು; ಕುತ್ತಿಗೆ ಹಿಚುಕುವುದು —ಮುಂತಾದ ಪ್ರಕಾರಗಳಲ್ಲಿ ನಡೆಸಿದ ಆಚಾರ್ಯರ ಮಲ್ಲವಿದ್ಯೆಯ ಪ್ರಾವಿಣ್ಯದ ಪರೀಕ್ಷೆಯ ಕುರಿತ ವಿವರಿಸಿದ ಪ್ರಭಂಜನಾಚಾರ್ಯರು, ಆ ಪರೀಕ್ಷೆ ಎಲ್ಲಿ ನಡೆಯಿತೆಂದು ಸುಮಧ್ವವಿಜಯದಲ್ಲಿ ಉಲ್ಲೇಖಿಸಲ್ಪಟ್ಟಿಲ್ಲವಾದರೂ ಗಂಡವಾಟನ ಊರಾಗಿದ್ದು, ಅವನ ಬೆಂಬಲಿಗರೆಲ್ಲ ಹೆಚ್ಚಾಗಿ ಇರುತ್ತಿದ್ದ ಕಾಂತಾವರದಲ್ಲಿಯೇ ಅವನ ಮೂಲಕ ಮಲ್ಲವಿದ್ಯೆಯ ಪರೀಕ್ಷೆ ನಡೆದಿರುವ ಸಾಧ್ಯತೆ ಹೆಚ್ಚಿದೆ ಎಂದು ಅಭಿಪ್ರಾಯಪಟ್ಟರು.

ಕಾಂತೇಶ್ವರ ದೇವಾಲಯದ ಎಡ ಪಾರ್ಶ್ವದ ಕೆಳಗೆ ಇರುವ ಪಲಿಮಾರು ಮಠದಲ್ಲಿದ್ದ ಲಕ್ಷ್ಮೀನರಸಿಂಹನ ಸಂದರ್ಶನ; ಮಹಾಪೂಜೆ, ಭೋಜನ—ಇವುಗಳ ಬಳಿಕ ಅಪರಾಹ್ಣ ಭೀಮನ ಬಂಡೆಯ ದರ್ಶನಕ್ಕಾಗಿ ಕಳಸಕ್ಕೆ ಪ್ರಯಾಣ.

## ಭೀಮನ ಬಂಡೆಗೆ ಸಾಹಸ ಯಾತ್ರೆ

ಆಗ ಮಧ್ಯಾಹ್ನ ಸುಮಾರು ಒಂದು ಗಂಟೆ. ಚಿಕ್ಕಮಗಳೂರು ಜಿಲ್ಲೆಯ ಕಳಸಗ್ರಾಮದಲ್ಲಿ ಭದ್ರಾನದಿಯ ತೀರದಲ್ಲಿ ಇರುವ ಭೀಮನ ಬಂಡೆಯ ದರ್ಶನಕ್ಕಾಗಿ ಹೊರಡಲಾಯಿತು.

ಏಳು ದಿನಗಳ ಯಾತ್ರೆಯಲ್ಲಿ ಯಾತ್ರಿಕರೆಲ್ಲ ಹೆಚ್ಚು ಪರಿಶ್ರಮ, ಆಯಾಸಕ್ಕೊಳಗಾದ ದಿನ ಅದೇ ಆಗಿತ್ತು. ಕಳಸವನ್ನು ತಲುಪಿದಾಗ ಸಂಜೆ 5 ಗಂಟೆ. ಹೊರನಾಡಿಗೆ ಹೋಗುವ ರಸ್ತೆಯಲ್ಲಿ ಸಾಗಿ, ವೇಂಕಟರಮಣ ದೇವಾಲಯದ ಬಳಿಕ ಸಿಗುವ ಬಲಮಗ್ಗುಲಿನ ಮಣ್ಣಿನ ದಾರಿಯಲ್ಲಿ ಮುಂದುವರಿದೆವು. ಸುಮಾರ 1 ಕಿ. ಮೀ. ದಾಟಿದಾಗ ಅರಣ್ಯದಲ್ಲಿ ಎರಡು ಕವಲು ದಾರಿಗಳು ಸಿಗಲು ಯಾವ ದಾರಿಯಲ್ಲಿ ಸಾಗಬೇಕೆಂದು ಗೊಂದಲ ಉಂಟಾಯಿತು. ಅಲ್ಲಿಗೆ ಹೋಗಿ ಬಂದಿದ್ದವರು ಒಬ್ಬಿಬ್ಬರು ನಮ್ಮಲ್ಲಿ ಇದ್ದರಾದರೂ ಬಹಳ ಹಿಂದೆ ಹೋಗಿದ್ದ ಅವರು ಖಚಿತವಾಗಿ ತಿಳಿಸಲು ಅಸಮರ್ಥರಾಗಿದ್ದರು. ಯಾರನ್ನಾದರೂ ವಿಚಾರಿಸೋಣ ಎಂದರೆ ಅರಣ್ಯದ ನಡುವೆಯ ಅಲ್ಲಿ ಜನಸಂಚಾರ ವಿರಳ. ಒಬ್ಬಿಬ್ಬರು ಕಾಣಿಸಿಕೊಂಡರೂ ಮಧ್ವಾಚಾರ್ಯರು ಎತ್ತಿ ಇಟ್ಟ ಬಂಡೆ ಎಂದಾಗ ತಮಗೇನೂ ತಿಳಿಯದು ಎಂದು ಅವರು ಸೂಚಿಸುತ್ತಿದ್ದರು. ಹಿಂದೆ ಮತ್ತೊಂದು ತಿರುವು ಮಾರ್ಗ ಸಿಕ್ಕಿತ್ತು. ಅದರಲ್ಲಿ ಹೋಗಬೇಕಿತ್ತೇನೋ? ಎಂಬ ಸಂಶಯವೂ ಮೂಡಿತ್ತು. ಹೀಗೆ ಸುಮಾರು ಅರ್ಧಗಂಟೆ ಕಾಲ ಗೊಂದಲವೋ ಗೊಂದಲ. ಅಷ್ಟರಲ್ಲಿ ಯಾರೋ ಇಬ್ಬರು ಹುಡುಗರು ಅರಣ್ಯಮಾರ್ಗದಲ್ಲಿಯೇ ಸುಮಾರು 1 ಕಿ.ಮೀ. ಸಾಗಿದಾಗ ಅಂಬುತೀರ್ಥದ ಸಮೀಪದಲ್ಲಿ ಭೀಮನ ಬಂಡೆ ಇದೆ ಎಂದು ತಿಳಿಸಿ, ತಾವು ಅಲ್ಲಿಗೆ ಕರೆದೊಯ್ಯುವುದಾಗಿ ಹೇಳಿದರು. ಹುಡುಗರ ಮಾತನ್ನು ಎಷ್ಟರ ಮಟ್ಟಿಗೆ ನಂಬಬಹುದೆಂದು ಯೋಚಿಸುತ್ತಿದ್ದಂತೆ ಆ ಕಡೆಯಿಂದ ಒಂದು ಕಾರು ನಮ್ಮೆಡೆಗೆ ಬಂತು. ಅದರಲ್ಲಿ ಆ ಪರಿಸರದ ಪರಿಚಯವುಳ್ಳ ವೃದ್ಧರೊಬ್ಬರಿದ್ದರು. ಅವರೂ ಅಂಬುತೀರ್ಥದ ಭೀಮನ ಬಂಡೆಯೇ ಮಧ್ವಾಚಾರ್ಯರು ನಿಲ್ಲಿಸಿರುವ ಬಂಡೆಯಾಗಿದ್ದಿರಬೇಕೆಂದು ದೃಢಪಡಿಸಿದರು. ಆ ಮೇಲೆ ತಿಳಿಯಿತು ಅಂಬುತೀರ್ಥದ ಭೀಮನ ಬಂಡೆಯಾಗಿ ಆ ಶಿಲೆ ಹಾಗೂ ಆ ಪ್ರದೇಶ ಅಲ್ಲಿಯ ಜನರಿಗೆ ಪರಿಚಿತ ಎಂದು. ವಾಹನ ಸಂಚಾರಕ್ಕೆ ಯೋಗ್ಯವೆನಿಸದ ಆ ಅರಣ್ಯ ಮಾರ್ಗದಲ್ಲಿ ಕಾಲ್ನಡಿಗೆಯಿಂದಲೇ ಮುಂದುವರಿಯಬೇಕಾಯಿತು. ಕತ್ತಲು ಆಗಾ

ಗಲೇ ಕವಿಯಲು ಆರಂಭವಾಗಿತ್ತು. ಪ್ರಾಯಶಃ ಅಷ್ಟು ಜನಸಮೂಹವನ್ನು ಆ ಮಾರ್ಗ ಹಿಂದೆಂದೂ ಕಂಡಿರದು. ಸ್ವಾರಸ್ಯ ಅಂದರೆ ಎಂಭತ್ತನಾಲ್ಕು ವರ್ಷ ವಯಸ್ಸಿನ ಶ್ರೀ ವಿದ್ಯಾಮಾನ್ಯತೀರ್ಥರೂ ಆ ಶಿಲೆಯನ್ನು ಕಾಣಬೇಕೆಂದು ಉತ್ಸಾಹದಿಂದ ಹೊರಟಿದ್ದರು. ಅವರನ್ನು ಆ ಬಂಡೆ ಎಡೆಗೆ ನಡೆಸಿಕೊಂಡೇ ಕರೆದೊಯ್ಯಬೇಕೆಂದು ಸಂಕಲ್ಪಿಸಿದ್ದ ದೇವರು ಅಂದು ಅವರ 'ವ್ಹೀಲ್‌ಚೇರ'ನ್ನು ವಾಹನದಲ್ಲಿ ಹಾಕುವುದಕ್ಕೆ ಪರಿಚಾರಕರಿಗೆ ಮರವು ಕೊಟ್ಟಿದ್ದ. ಆದ್ದರಿಂದ ಆ ಅರಣ್ಯದ ಕಲ್ಲುಮುಳ್ಳಿನ ಮಾರ್ಗದಲ್ಲಿಯೂ ಶ್ರೀಪಾದರೂ ನಡೆದುಕೊಂಡೇ ಸಾಗ ಬೇಕಾಯಿತು. ಅಂತೂ ಸುಮಾರು 6ವರೆ ಗಂಟೆಗೆ ಭದ್ರಾನದಿಯ ತೀರಕ್ಕೆ ಬಂದ ದ್ದಾಯಿತು. ಆ ತೀರ ತುಂಬ ಬಂಡೆಗಳು ಇದ್ದವಾದರೂ ಶ್ರೀ ಮಧ್ವರು ಸ್ಥಾಪಿ ಸಿದ್ದ ಬಂಡೆಯನ್ನು ಗುರುತಿಸುವುದೇನೂ ಅಷ್ಟೊಂದು ಕಷ್ಟವಾಗಲಿಲ್ಲ. ಯಾಕೆಂದರೆ ಭದ್ರಾನದಿಯ ತೀರದಲ್ಲಿ ಸುಮಾರು 1 ಫರ್ಲಾಂಗ್ ಪೂರ್ವಕ್ಕೆ ಸಾಗಿ ದಾಗ ಆ ಶಿಲೆ ಕಟ್ಟೆಯ ಮೇಲೆ ಸ್ಥಾಪಿಸಲ್ಪಟ್ಟಂತೆ ಎದ್ದು ಕಾಣುತ್ತಿತ್ತು. ಶಿಲೆಯ ಪಶ್ಚಿಮ ಪಾರ್ಶ್ವದಲ್ಲಿ ಆಚಾರ್ಯರ ರೇಖಾಚಿತ್ರವನ್ನು ಕೊರೆಯಲಾಗಿದೆಯಲ್ಲದೆ, ಕನ್ನಡ ಲಿಪಿಯಲ್ಲಿ "ಶ್ರೀ ಮಧ್ವಾಚಾರ್ಯೈಃ ಏಕಹಸ್ತೇನ ಆನೀಯ ಸ್ಥಾಪಿತಾ ಶಿಲಾ" ಎಂದು ಬರೆಯಲಾಗಿದೆ. ಸುಮಾರು ಒಂದೂವರೆ ಆಳಿನಷ್ಟು ಎತ್ತರ ವುಳ್ಳ ಆ ಬಂಡೆಯನ್ನು ಯಾತ್ರಿಕರಲ್ಲಿ ಗಂಡಸರೆಲ್ಲ ಮಡಿಪಂಚೆಯನ್ನು ಏರುಹಗ ದಂತೆ ಮಾಡಿ ಕಷ್ಟಪಟ್ಟು ಒಬ್ಬೊಬ್ಬರಾಗಿ ಏರಿದರು. ಶ್ರೀ ವಿದ್ಯಾಧೀಶತೀರ್ಥ ರೂ ಹೀಗೆಯೇ ಏರಿದರು. ಶ್ರೀ ವಿದ್ಯಾಮಾನ್ಯತೀರ್ಥರು ಆ ಬಂಡೆಯ ಸಮೀಪ ದಲ್ಲಿಯೇ ಕುಳಿತು ಅಂತರ್ಮುಖಿಗಳಾಗಿ ಏನನ್ನೋ ಧ್ಯಾನ ಮಾಡುತ್ತಿದ್ದರು. ಬಂಡೆಯ ಮೇಲೆ ಏರಿದ ಪ್ರತಿಯೊಬ್ಬರಿಗೂ ತಾವು ಆಚಾರ್ಯರ ವಿಶೇಷಾನುಗ್ರಹ ಕ್ಕೆ ಪಾತ್ರರಾದ ಅನುಭವ. ಆಚಾರ್ಯರು ಆ ಶಿಲೆಯನ್ನು ಸ್ಥಾಪಿಸಿದ ವಿಚಾರ ವನ್ನು ತಿಳಿಸುವ ಸುಮಧ್ವವಿಜಯದ ಪದ್ಯಗಳನ್ನು ಪಠಿಸಲಾಯಿತು. ದೀಪ ಹಚ್ಚಿ ಆರತಿ ಬೆಳಗಲಾಯಿತು. ಏನೋ ಹುರುಪಿನಲ್ಲಿ ಬಂಡೆಯನ್ನು ಏರಿದ್ದಾಯಿತು. ಆದರೆ ಇಳಿಯುವುದು ಹೇಗೆ? ಬಂಡೆಯ ಒಂದು ಉಬ್ಬು ಭಾಗವನ್ನು ಹಿಡಿದು ಕೊಂಡು ತೆವಳುತ್ತ ಕೆಳಗಿನವರಿಂದ ಕಾಲಿಗೆ ಸ್ವಲ್ಪ ಆಧಾರ ಪಡೆದು ಜಿಗಿಯ ಲಾಯಿತು. ಹೀಗೆ ಭೀಮನ ಬಂಡೆಯ ಸಾಹಸ ಯಾತ್ರೆಯಲ್ಲಿ ಆ ಬಂಡೆಯನ್ನು ಏಣಿ ಮುಂತಾದವುಗಳ ನೆರವಿಲ್ಲದೆ ಮೇಲೇರಿ ಕೆಳಕ್ಕೆ ಇಳಿದುದು ಶಿಖರಪ್ರಾಯವಾದ ಅಂಶವಾಗಿತ್ತು.

ಕತ್ತಲು ಆಗಲೇ ಕವಿದಿತ್ತು. ಕಾಲ್ನಡಿಗೆಯಿಂದಲೇ ಆ ಅರಣ್ಯದ ದಾರಿ ಯಲ್ಲಿ ಹಿಂತಿರುಗಲಾಯಿತು. ಸಾಧ್ಯವಾದಷ್ಟು ದೂರ ಶ್ರೀಗಳವರ ವಾಹನ ವನ್ನು ತರಲಾಗಿತ್ತು. ಅದರಲ್ಲಿ ಕುಳಿತು ಸಾಧ್ಯವಾದಷ್ಟು ವ್ಯಕ್ತಿಗಳು ಒಮ್ಮೆ

ರಸ್ತೆಯು ಬದಿಗೆ ಸಾಗಿದ್ದಲ್ಲದೆ. ಅದನ್ನೇ ಪುನಃ ಕಳುಹಿಸಿ ಅದರ ಮೂಲಕ ದಾರಿಯಲ್ಲಿ ಬರುತ್ತಿದ್ದ ಯಾತ್ರಿಕರನ್ನೆಲ್ಲ ರಸ್ತೆಯು ಬದಿಗೆ ಕರೆತರಲಾಯಿತು. ಆಗ ಸುಮಾರು 8 ಗಂಟೆಯಾಗಿತ್ತು. ಅಲ್ಲಿಂದ ಪಲಿಮಾರಿನಲ್ಲಿರುವ ಮಠಕ್ಕೆ ಹೋಗಲಾಯಿತು. ರಾತ್ರಿ 11 ಗಂಟೆಗೆ ಪಲಿಮಾರು ಗ್ರಾಮದ ಮಠದಲ್ಲಿ ಎಲ್ಲ ಸೇರಿಕೊಂಡದ್ದಾಯಿತು. ದೈಹಿಕವಾಗಿ ಪ್ರತಿಯೊಬ್ಬರಿಗೂ ಶ್ರಮವಾಗಿತ್ತಾದರೂ ಏನೋ ಆಧ್ಯಾತ್ಮಿಕ ಸಾಹಸ ನಡೆಸಿದ ತೃಪ್ತಿಯಿಂದಾಗಿ ಮಾನಸಿಕ ಹುರುಪು ಎದ್ದು ಕಾಣುತ್ತಿತ್ತು.

## ಮಧ್ವ-ಮಧ್ಯವಾಟಗಳ ಸಂದರ್ಶನ

ಬಂಟ್ವಾಳ ತಾಲ್ಲೂಕಿನ 'ಮಧ್ವ' ಉಡುಪಿಯಿಂದ ಮಧ್ಯವಾಟಕ್ಕೆ ಹೋಗುವಾಗ ದಾರಿಯ ಮಧ್ಯದಲ್ಲಿ ಶ್ರೀಮದಾಚಾರ್ಯರು ತಂಗುತ್ತಿದ್ದ ಸ್ಥಳ. 8-4-96 ರಂದು ಬೆಳಿಗ್ಗೆ ಪಲಿಮಾರಿನ ಆಂಜನೇಯನ ದರ್ಶನ ಪಡೆದು ಮಧ್ವಕ್ಕೆ ಹೋಗಲಾಯಿತು. ಅಂದು ಶ್ರೀ ಪೇಜಾವರ ಮಠದ ಶ್ರೀ ವಿಶ್ವೇಶತೀರ್ಥರೂ ಜೊತೆಗಿದ್ದರು. ಆಚಾರ್ಯರು ತಂಗುತ್ತಿದ್ದ ಒಂದು ಕಟ್ಟೆ, ನಾಗಾಕಾರದ ಶಿಲಾಶಾಸನ—ಇವನ್ನು ಒಳಗೊಂಡ ಆ ಸ್ಥಳ ವಿಠಲ ಶೆಟ್ಟಿ ಎನ್ನುವವರಿಗೆ ಸೇರಿದ್ದು. ಅದನ್ನು ಅವರು ಶ್ರೀ ಪೇಜಾವರ ಶ್ರೀಗಳವರಿಗೆ ದಾನ ಮಾಡಿರುತ್ತಾರೆ.

ಶ್ರೀ ವಿಠಲ ಶೆಟ್ಟಿ ಅವರು ತಾವು ಶ್ರೀ ಪೇಜಾವರ ಶ್ರೀಗಳವರಿಗೆ ಆ ಸ್ಥಳವನ್ನು ದಾನ ಮಾಡಿದುದರ ಹಿನ್ನೆಲೆಯನ್ನು ತಿಳಿಸುತ್ತ. ಅವರ ಹಿರಿಯರಿಗೆ ಸುಮಾರು ಐವತ್ತು ವರ್ಷಗಳ ಹಿಂದೆ ಸ್ವಪ್ನದಲ್ಲಿ ಒಬ್ಬ ಬ್ರಾಹ್ಮಣ ಬಂದು ಮುಂದೆ ಇಪ್ಪತ್ತೈದು ವರ್ಷಗಳ ಬಳಿಕ ಒಬ್ಬ ಮಹನೀಯರು ಅಲ್ಲಿಗೆ ಬರುವರು; ಅವರ ಮೂಲಕ ಅಲ್ಲಿ ಒಂದು ಗುಡಿಯ ನಿರ್ಮಾಣವಾಗುವುದು; ಆ ಸ್ಥಳದಲ್ಲಿ ಒಂದು ಅಶ್ವತ್ಥ ಬೆಳೆಯುವುದು ...ಎಂದೆಲ್ಲ ತಿಳಿಸಲಾಗಿತ್ತು. ಅದಕ್ಕನುಗುಣವಾಗಿ ಶ್ರೀ ಪೇಜಾವರ ಶ್ರೀಗಳವರು ಬಂದಿದ್ದು ಅವರಿಗೇ ದಾನಮಾಡಲಾದ ಆ ಸ್ಥಳದಲ್ಲಿ ಅವರಿಂದ ಅಲ್ಲಿ ಒಂದು ಗುಡಿಯ ನಿರ್ಮಾಣವಾಗಲಿದೆ....ಎಂದು ಹೇಳಿದರು. ಪೇಜಾವರ ಶ್ರೀಗಳು ಕನ್ನಡದಲ್ಲಿ ಶ್ರೀ ವಿಠಲ ಶೆಟ್ಟರು ತುಳುವಿನಲ್ಲಿ ತಿಳಿಸಿದ್ದನ್ನು ವಿವರಿಸಿದರು.

ಮಧ್ವದಿಂದ ಮಧ್ಯವಾಟ ಮಠಕ್ಕೆ ಹೋಗಲಾಯಿತು. ಸುಬ್ರಹ್ಮಣ್ಯ ಉಡುಪಿ ಇವುಗಳ ಮಧ್ಯೆ ಇರುವ ಮಧ್ಯವಾಟ ಮಠದಲ್ಲಿ ಶ್ರೀ ಮಧ್ವರು ವ್ಯಾಸ ಮುಷ್ಟಿಯ ಶಿಲೆಯನ್ನು ಪೂಜಿಸುತ್ತಿದ್ದರು. ಈ ಪವಿತ್ರ ಶಿಲೆ ಈಗ ಸೋದೆ ಮಠದಲ್ಲಿ ಪೂಜಿಸಲ್ಪಡುತ್ತಿರುವುದಾದರೂ ಆಚಾರ್ಯರ ಕಾಲದಲ್ಲಿ ವ್ಯಾಸ ಮುಷ್ಟಿಯ ಮಾಧ್ಯಮದಲ್ಲಿ ಪೂಜೆ ನಡೆಯುತ್ತಿದ್ದ ಕ್ಷೇತ್ರ ಎಂಬುದನ್ನು ವಿಶ್ಲೇಷಿಸಿಕೊಂಡು

ಮಧ್ಯವಾಟದ ಸಂದರ್ಶನವನ್ನು ಪಡೆಯಲಾಯಿತು. 'ವೇದವ್ಯಾಸ ಗಣಾಧೀಶ...' ಎಂದು ಶ್ರೀ ವಾದಿರಾಜತೀರ್ಥರಿಂದ ತಮ್ಮ ತೀರ್ಥ ಪ್ರಬಂಧದಲ್ಲಿ ಸ್ತುತಿಸಲ್ಪಟ್ಟ ಶ್ರೀ ವೇದವ್ಯಾಸರ ಪ್ರತೀಕವನ್ನೂ ನೋಡಲಾಯಿತು. ಶ್ರೀ ಪೇಜಾವರ ಶ್ರೀಗಳವರು ಶ್ರೀ ವೇದವ್ಯಾಸರ ಬಗ್ಗೆ ಪ್ರವಚನ ನೀಡಿದರು.

## ಎರಕೀ ಮಠದ ಕೇಶವನ ಸಂದರ್ಶನ

ಮಧ್ವ-ಮಧ್ಯವಾಟ ಮಠದ ಸಂದರ್ಶನದ ಬಳಿಕ ಎರಕೀ ಮಠಕ್ಕೆ ಹೋಗಲಾಯಿತು. ಆಚಾರ್ಯರು ಗ್ರೀಷ್ಮಕಾಲದಲ್ಲಿ ಮೋಡಗಳ ಮೂಲಕ ಮಳೆ ತರಿಸಿ ತುಂಬಿಸಲಾಗಿದ್ದ ತೀರ್ಥದಲ್ಲಿ ಹೆಚ್ಚಿನವರು ಸ್ನಾನ ಮಾಡಿದರು. ಶ್ರೀಮದಾಚಾರ್ಯರು ಅರ್ಚಿಸಿ ಅನುಗ್ರಹಿಸಿದ್ದ ಶ್ರೀಭೂಸಹಿತನಾದ ಕೇಶವನ ಮೂರ್ತಿಯ ಸಂದರ್ಶನವನ್ನು ಪಡೆಯಲಾಯಿತು.

ಮಧ್ಯಾಹ್ನದ ಭೋಜನದ ಬಳಿಕ ಆಚಾರ್ಯರು ಮಳೆ ತರಿಸಿ ತುಂಬಿಸಿದ್ದ ಸರೋವರದ ದಡದಲ್ಲಿಯೇ ಪ್ರವಚನ ನಡೆಯಿತು. ಶ್ರೀಮದಾಚಾರ್ಯರು ಸಾತ್ತ್ವಿಕರನ್ನು ಅಧ್ಯಾತ್ಮದೆಡೆಗೆ ತಿರುಗಿಸುವುದಕ್ಕಾಗಿ ಬಂಡೆಯನ್ನು ಸ್ಥಾಪಿಸಿದುದೇ ಮುಂತಾದ ಪವಾಡಗಳನ್ನು ತೋರಿಸಿದರೆಂದ ಶ್ರೀ ಪ್ರಭಂಜನಾಚಾರ್ಯರು ಗ್ರೀಷ್ಮ ಋತುವಿನಲ್ಲಿ ಮಳೆ ಬರಿಸಿ ಬಾಹ್ಯತಾಪವನ್ನು ಪರಿಹರಿಸಿದಂತೆ ಶ್ರೀಮದಾಚಾರ್ಯರು ಶಾಸ್ತ್ರಮೋಡದಿಂದ ತತ್ತ್ವಜ್ಞಾನದ ಮಳೆ ತರಿಸಿ ಸಾಂಸಾರಿಕ ತಾಪಗಳನ್ನೂ ಪರಿಹರಿಸಿರುವರೆಂದು ಬಣ್ಣಿಸಿದರು. ಅಲ್ಲಿಯ ಆರಾಧ್ಯನಾದ ಶ್ರೀ ಕೇಶವನ ಸ್ತುತಿಯಿಂದಲೇ ಪ್ರಾರಂಭಿಸಲ್ಪಟ್ಟಿದ್ದ 'ಕೃಷ್ಣಾಮೃತ ಮಹಾರ್ಣವ'ದ ಮೊದಲ ಮಂಗಲ ಪದ್ಯ 'ಅರ್ಚಿತಃ ಸಂಸ್ಮೃತೋ ಧ್ಯಾತಃ....' —ಇದನ್ನು ಎಲ್ಲರ ಬಾಯಿಯಿಂದ ಹೇಳಿಸಲಾಯಿತು.

ಶ್ರೀಮದಾಚಾರ್ಯರು ವಿಷ್ಣುಮಂಗಲ ದೇವಾಲಯ ಮುಂತಾದೆಡೆ ನಡೆಸಿದ ಮಹಿಮೆಗಳನ್ನು ವಿವರಿಸಿದ ಶ್ರೀ ವಿಶ್ವೇಶತೀರ್ಥರು ಭದ್ರಾನದಿಯ ದಡದಲ್ಲಿರುವ ಭೀಮನ ಬಂಡೆಯ ಸಂರಕ್ಷಣೆಗಾಗಿ ತಮ್ಮ ನೇತೃತ್ವದಲ್ಲಿ ಸಂಕಲ್ಪಿತವಾದ ಕಾರ್ಯಕ್ರಮವನ್ನು ತಿಳಿಸಿದರು.

ಶ್ರೀ ವಿದ್ಯಾಧೀಶತೀರ್ಥರು ಯಮಕ ಭಾರತದ ಎರಡನೇ ಪದ್ಯದ ಬಗ್ಗೆ ಪ್ರವಚನವನ್ನು ನೀಡಿದರು.

ಅಲ್ಲಿಂದ ಕುಮಾರಧಾರೆ ನೇತ್ರಾವತಿಗಳ ಸಂಗಮದ ತೀರದಲ್ಲಿರುವ ಉಪ್ಪಿನಂಗಡಿ ಪಂಚಲಿಂಗೇಶ್ವರನ ದರ್ಶನ ಪಡೆದು ಕೋಡಿಪಾಡಿಯ ಜನಾರ್ದನ ದೇವಾಲಯಕ್ಕೆ ಹೋಗಲಾಯಿತು. ಅಲ್ಲಿ ಸಾರ್ವಜನಿಕ ಸಭೆಗಾಗಿ ಏರ್ಪಾಟು

ನಡೆದಿತ್ತು. ಅಲ್ಲಿಗೆ ಹೋಗುವಾಗ ವಿಳಂಬವಾದದ್ದರಿಂದ ಶ್ರೀಗಳವರ ಪೂಜೆಯ ಅನಂತರ ರಾತ್ರಿ 9-30ರಿಂದ 10-30ರ ವರೆಗೆ ಪ್ರವಚನ ಕಾರ್ಯಕ್ರಮ ನಡೆಯಿತು. ಪ್ರಭಂಜನಾಚಾರ್ಯರು, ಶ್ರೀ ವಿಶ್ವೇಶತೀರ್ಥರು ಹಾಗೂ ಶ್ರೀ ವಿದ್ಯಾಮಾನ್ಯತೀರ್ಥರು ಆಚಾರ್ಯರ ಅಪೂರ್ವ ವ್ಯಕ್ತಿತ್ವದ ಬಗ್ಗೆ, ಕೊಡುಗೆಯ ಬಗ್ಗೆ ಮಾತನಾಡಿದರು.

## ಕೋಡಿಪಾಡಿಯಲ್ಲಿ ನಾಲ್ಕು ಹೊತ್ತು ತಂಗುವಿಕೆ

ಕೋಡಿಪಾಡಿ ಜನಾರ್ದನನ ಸನ್ನಿಧಿಯಲ್ಲಿ ಶ್ರೀಮದಾಚಾರ್ಯರು ಚಾತುರ್ಮಾಸ್ಯ ವ್ರತವನ್ನು ಕೈಗೊಂಡಿದ್ದರು. ಅದರದ್ದೇ ಪ್ರಭಾವದಿಂದ ಎಂಬಂತೆ ಪಾವನ ಯಾತ್ರೆಯ ಯಾತ್ರಿಕರು 8-4-96ರಂದು ರಾತ್ರಿ, 9-4-96ರಂದು ಪೂರ್ವಾಹ್ಣ ಮತ್ತು ರಾತ್ರಿ ಹಾಗೂ 10-4-96ರಂದು ರಾತ್ರಿ ಹೀಗೆ ನಾಲ್ಕು ಹೊತ್ತು ಅಲ್ಲಿ ತಂಗಿದ್ದರು. ಶ್ರೀ ಪ್ರಭಂಜನಾಚಾರ್ಯರ ನಾಲ್ಕು ಪ್ರವಚನಗಳು ನಡೆದಿದ್ದವು. ಹೀಗೆ ನಾಲ್ಕು ಸಂಖ್ಯೆಯ ಈ ಸಂಯೋಜನೆ ಆಕಸ್ಮಿಕವೇ ಹೊರತು ಉದ್ದೇಶಪೂರ್ವಕವಾಗಿ ನಡೆದದ್ದಲ್ಲ ಇದರ ಔಚಿತ್ಯವನ್ನು ಶ್ರೀ ಪ್ರಭಂಜನಾಚಾರ್ಯರು ತಮ್ಮ ಪ್ರವಚನದಲ್ಲಿ ಉಲ್ಲೇಖಿಸಿದ್ದರು.

## ಶ್ರೀ ಮಧ್ವರ ಸಂಪರ್ಕಕ್ಕೊಳಗಾದ ಸ್ಥಳಗಳಲ್ಲಿ ಸ್ಮಾರಕಗಳ ನಿರ್ಮಾಣಕ್ಕೆ ಒತ್ತಾಯ

9-4-96ರಂದು ಪೂರ್ವಾಹ್ಣ 10-00 ಗಂಟೆಗೆ ಶ್ರೀ ಪೇಜಾವರ ಶ್ರೀಗಳವರ ಅಧ್ಯಕ್ಷತೆಯಲ್ಲಿ ಸಾರ್ವಜನಿಕ ಸಭೆ ನಡೆಯಿತು.

ಶ್ರೀ ವಿಶ್ವೇಶತೀರ್ಥರು ಸಾಕ್ಷಾತ್ಕಾರ, ಸಮಾಧಿ, ಧ್ಯಾನ ಸ್ಮರಣೆಗಳ ಬಗ್ಗೆ ಶ್ರೀ ಮದಾಚಾರ್ಯರ ಸಂದೇಶವನ್ನು ವಿವರಿಸುತ್ತ, 'ಯತತೋಽಪಿ ಹರೇಃ ಪದಸಂಸ್ಮರಣೇ ಸಕಲಂ ಹ್ಯಘಮಾಶು ಲಯಂ ವ್ರಜತಿ' ಭಗವಂತನ ಸ್ಮರಣೆಗಾಗಿ ಪ್ರಯತ್ನ ಪಟ್ಟರೂ ಸಾಕಷ್ಟು ಫಲವಿದೆ—ಎಂದು ಸಾಧನೆಯ ಬಗ್ಗೆ ತೋರಿಸಿದ ಔದಾರ್ಯವನ್ನು ಸ್ಪಷ್ಟೀಕರಿಸಿದರು. ಶ್ರೀ ವಿದ್ಯಾಧೀಶತೀರ್ಥರು ಯಮಕ ಭಾರತದ ಶ್ರೀಕೃಷ್ಣನ ಅವತಾರವನ್ನು ತಿಳಿಸುವ 'ಸೋಽಜನಿ ದೇವಕ್ಯಂತೇ....' ಎಂಬ ಪದ್ಯದ ಸ್ವಾರಸ್ಯವನ್ನು ಬಿಡಿಸಿ ತೋರಿಸಿದರಲ್ಲದೆ, ತುಳುವಿನಲ್ಲಿ 'ಕೊಡಿ' ಅಂದರೆ 'ಮೊಳಕೆ' ಪಾಡಿ ಅಂದರೆ 'ಹಾಕಿ' ಎಂದು ಅರ್ಥ. ಇಲ್ಲಿ ಬೀಜ ಹಾಕಿ ಮೊಳಕೆ ಬರಿಸಿದರೆ—ಅದು ಸಮೃದ್ಧವಾಗಿ ಬೆಳೆಯುವುದೆಂದು ತಾತ್ಪರ್ಯ. ಯಾವುದ್ಯಾವುದರದ್ದೋ ಮೊಳಕೆ ಹಾಕದೆ, ಶಾಸ್ತ್ರದ, ತತ್ತ್ವಜ್ಞಾನದ ಮೊಳಕೆಯನ್ನು ಹಾಕಿ ಅದು ಮುಂದೆ ಸಮೃದ್ಧವಾಗಿ ಪಸರಿಸುವಂತೆ ಜನಾರ್ದನಸ್ವಾಮಿಯ

ಸನ್ನಿಧಾನದಲ್ಲಿ ತೊಡಗಬೇಕೆಂದು ಕರೆ ನೀಡಿದರು.

ಪ್ರಭಂಜನಾಚಾರ್ಯರು ತಮ್ಮ ಪ್ರವಚನದಲ್ಲಿ ಶ್ರೀ ಮಧ್ವರ ಸಂಪರ್ಕಕ್ಕೊಳಗಾದ ಪ್ರತಿಯೊಂದು ಸ್ಥಳದಲ್ಲಿಯೂ ಅದರ ಸ್ಮಾರಕವಾಗಿ ಮಧ್ವರ ಪ್ರತೀಕವನ್ನೊಳಗೊಂಡ ಒಂದು ಮಧ್ವಮಂಟಪ, ಆಯಾ ಸ್ಥಳಕ್ಕೆ ಮಧ್ವರ ಸಂಪರ್ಕವನ್ನು ಉಲ್ಲೇಖಿಸುವ ಸುಮಧ್ವವಿಜಯದ ಶ್ಲೋಕಗಳನ್ನು ಅನುವಾದ ಸಹಿತವಾಗಿ ಶಿಲೆಯಲ್ಲಿ ಬರೆಯಿಸಿಡುವುದು ಹಾಗೂ ಅಲ್ಲಿಗೆ ಯಾತ್ರಿಕರಿಗೆ ಬರಲು ಅನುಕೂಲವಾಗುವಂತೆ ಮಾರ್ಗದರ್ಶನದ ಫಲಕಗಳನ್ನು ಸ್ಥಾಪಿಸುವುದು ಇವಿಷ್ಟು ಅವಶ್ಯವಾಗಿ ಆಗಬೇಕಾಗಿದೆ. ಅಖಿಲಭಾರತ ಮಾಧ್ವಮಹಾಮಂಡಲವೇ ಈ ಕಾರ್ಯನಿರ್ವಹಣೆಯ ಹೊಣೆಗಾರಿಕೆಯನ್ನು ಹೊರಬೇಕೆಂದು ಮಾಧ್ವಮಹಾಮಂಡಲದ ಸಂರಕ್ಷಕರಾದ ಶ್ರೀ ಪೇಜಾವರ ಶ್ರೀಪಾದರಲ್ಲೂ ಅಧ್ಯಕ್ಷರಾದ ಶ್ರೀ ವಿಷ್ಣುಮೂರ್ತಿ ಎರ್ಕಾಡಿತ್ತಾಯರಲ್ಲೂ ವಿನಂತಿಸಿಕೊಳ್ಳುತ್ತೇನೆ' ಎಂದರು. ಸಭ್ಯರು ಒಕ್ಕೊರಳಿನ ಅನುಮೋದನೆಯಂತೆ ಕರತಾಡನ ನಡೆಸುತ್ತಿರಲು ವೇದಿಕೆಯಲ್ಲಿ ಉಪಸ್ಥಿತರಿದ್ದ ಆ ಇಬ್ಬರು ಮಹನೀಯರೂ ಮುಗುಳ್ನಗುತ್ತ ಮೌನದ ಮೂಲಕ ಆ ವಿನಂತಿಯನ್ನು ಒಪ್ಪಿಕೊಂಡರು.

## ಮಹಾಲಿಂಗೇಶ್ವರನೇ ತನ್ನಲ್ಲಿಗೆ ಕರೆದೊಯ್ದಂತೆ

ಅಂದು ಮಧ್ಯಾಹ್ನದ ಮೇಲೆ ಅಡೂರು ಮಹಾಲಿಂಗೇಶ್ವರ ದೇವಾಲಯಕ್ಕೆ ಪ್ರಯಾಣ. ನಮ್ಮ ಪೂರ್ವನಿಯೋಜಿತ ಕಾರ್ಯಕ್ರಮದ ಪ್ರಕಾರ ಆ ಪ್ರಯಾಣ ಸೇರಿದ್ದಿರಲಿಲ್ಲ. ಆದರೆ ಯಾವುದರದ್ದೋ ಪ್ರಸ್ತಾವದಲ್ಲಿ ಶ್ರೀಮದಾಚಾರ್ಯರು ವಿಷ್ಣುಸಹಸ್ರನಾಮಕ್ಕೆ ನೂರು ಅರ್ಥ ಹೇಳ ಹೊರಟ ಅಡೂರು ಮಹಾಲಿಂಗೇಶ್ವರ ದೇವಾಲಯ ಪುತ್ತೂರಿಗೆ ಸಮೀಪದಲ್ಲಿದೆಯಂತೆ ಎಂಬ ಒಂದು ಸುದ್ದಿ ಬಂತು. ಆದರೆ ಆ ಅಡೂರು ದೇವಾಲಯ ಎಲ್ಲಿದೆ? ಅಲ್ಲಿಗೆ ಹೇಗೆ ಹೋಗುವುದು? ಎಂಬ ಸಮಸ್ಯೆಗಳು ಕಾಡುತ್ತಿದ್ದಾಗ ಶ್ರೀ ಎರ್ಕಾಡಿತ್ತಾಯರು ಒಬ್ಬರನ್ನು ತೋರಿಸಿ, 'ಇವರು ಅಡೂರಿನವರು. ಅಲ್ಲಿಗೆ ಹೋಗಬೇಕಾದರೆ ನಿಮ್ಮನ್ನು ಅಲ್ಲಿಗೆ ಕರೆದೊಯ್ಯುವರು' ಎಂದು ತಿಳಿಸಿದರು. ಅಡೂರಿನ ಒಬ್ಬ ಧನಿಕ ಕೃಷಿಕರಾಗಿರುವ ಶ್ರೀ ಗೋಪಾಲಕೃಷ್ಣ ವೈಲಾಯರೇ ಆ ವ್ಯಕ್ತಿ. ಅವರು ಯಾತ್ರಿಕರನ್ನು ತಮ್ಮಲ್ಲಿಗೆ ಕರೆದೊಯ್ಯಲು ತುಂಬ ಸಂತೋಷಪಟ್ಟರು. ತಮ್ಮ ಜೀಪಿನ ಮೂಲಕ ಮುಂದೆ ಸಾಗುತ್ತ ಯಾವುದೇ ಬಗೆಯ ದಾರಿಯ ಗೊಂದಲಕ್ಕೆ ಎಡೆ ಇಲ್ಲದಂತೆ ನೇರವಾಗಿ ಅಡೂರಿನ ಮಹಾಲಿಂಗೇಶ್ವರನ ಸನ್ನಿಧಾನಕ್ಕೆ ಕರೆದೊಯ್ದರು. ಅದು ದುರ್ಗಮವಾದ ದಾರಿಯಾಗಿದ್ದರೂ ಏನೂ ಗೊಂದಲ ಆಗದಂತೆ ಅನಾಯಾಸವಾಗಿ ಮಹಾಲಿಂಗೇಶ್ವರನ ಸಂದರ್ಶನ ಪಡೆದ ಪ್ರತಿಯೊಬ್ಬನಿಗೂ ಅದು

ಆ ಮಹಾಲಿಂಗೇಶ್ವರನೇ ಕಲ್ಪಿಸಿದ ವ್ಯವಸ್ಥೆಯಂತೆ ಕಂಡಿದ್ದರೆ ಆಶ್ಚರ್ಯವಿಲ್ಲ.

## ಶ್ರೀ ಮಧ್ವರ ಸಂಪರ್ಕದ ಕುರಿತ ಹೇಳಿಕೆಗಳು

ಯಾತ್ರಿಕರನ್ನು ಕಂಡು ಆ ದೇವಾಲಯದ ಅಧಿಕಾರಿಗಳಿಗೆ, ಪರಿಚಾರಕರಿಗೆ ಸಂಭ್ರಮವೋ ಸಂಭ್ರಮ. ದೇವಾಲಯದ ಶರಣಂತಾಯ ಗಣೇಶರಾವ್ ಆ ದೇವಾಲಯಕ್ಕೆ ಶ್ರೀ ಮಧ್ವರ ಸಂಪರ್ಕದ ಕುರಿತು ಅಲ್ಲಿಯವರಿಗಿರುವ ಮಾಹಿತಿಗಳನ್ನೆಲ್ಲ ತಿಳಿಸಿದರು.

ಹಿಂದೆ ಅಲ್ಲಿಯ ವಿದ್ವಾಂಸರಿಗೂ ಶ್ರೀ ಮಧ್ವಾಚಾರ್ಯರಿಗೂ ಶ್ರೀ ವಿಷ್ಣುಸಹಸ್ರನಾಮದ ವಿಷಯದಲ್ಲಿ ಏನೋ ವಾದ ನಡೆಯಿತಂತೆ. ರುದ್ರ ದೇವಾಲಯದಲ್ಲಿ ಭಿಕ್ಷೆ ಸ್ವೀಕರಿಸುವುದಿಲ್ಲ ಎಂದ ಶ್ರೀ ಮಧ್ವರು ಅಲ್ಲಿ ಭಿಕ್ಷೆ ಸ್ವೀಕರಿಸುವಂತೆ ಅವರ ಮೂಲಕ ಮಹಾಲಿಂಗೇಶ್ವರನ ಬಲಪಾರ್ಶ್ವದಲ್ಲಿ ಶ್ರೀ ವಿಷ್ಣುವಿನ ಪ್ರತಿಷ್ಠೆಯನ್ನು ನಡೆಸಲಾಯಿತಂತೆ. 1986ರಲ್ಲಿ ಆ ವಿಷ್ಣು ವಿಗ್ರಹದ ಪುನಃ ಪ್ರತಿಷ್ಠೆ ನಡೆದಿದ್ದು, ಆಗ ಆ ಪ್ರತಿಮೆಯ ಕೆಳಗೆ ಎರಡು ಸಾಲಿಗ್ರಾಮಗಳು ದೊರೆತದ್ದರಿಂದ ಅದು ವೈಷ್ಣವರ ಮೂಲಕ ನಡೆದ ಪ್ರತಿಷ್ಠೆ ಎಂದು ಸ್ಪಷ್ಟವಾಗಿದೆ—ಎಂದೂ ಅವರು ತಿಳಿಸಿದರು.

## 'ಸಕಲಜ್ಞ' ಎಂದು ಆಚಾರ್ಯರನ್ನು ಗುರುತಿಸಿದ ಸ್ಥಳ

ಬಳಿಕ ದೇವಾಲಯದ ಎದುರಿನ ಪ್ರಾಂಗಣದಲ್ಲಿ ಪ್ರವಚನ ನಡೆಯಿತು. ಶ್ರೀ ವಿಶ್ವೇಶತೀರ್ಥರು ಆ ದೇವಾಲಯದಲ್ಲಿ ಶ್ರೀಮದಾಚಾರ್ಯರು ತೋರಿದ ಮಹಿಮೆಯುನ್ನು ವಿವರಿಸಿದರು. ಶ್ರೀ ವಿದ್ಯಾಮಾನ್ಯತೀರ್ಥರು ತಮ್ಮ ಪ್ರವಚನದಲ್ಲಿ ವಿಷ್ಣುಸರ್ವೋತ್ತಮತ್ವ ಮತ್ತು ಜಗತ್ಸತ್ಯತ್ವ ಶ್ರೀಮದಾಚಾರ್ಯರ ಸಿದ್ಧಾಂತದಲ್ಲಷ್ಟೇ ಸಾಧಿತವಾಗುವಂತಹದ್ದೆಂದು ಸಮರ್ಥಿಸಿದರು.

ಐತರೇಯ ಸೂಕ್ತಕ್ಕೆ ಇಲ್ಲಿಯ ವಿದ್ವಾಂಸರು ತಿಳಿದುಕೊಂಡಿದ್ದ ಅರ್ಥವನ್ನು ಶ್ರೀಮದಾಚಾರ್ಯರು ಬಲ್ಲವರಾಗಿದ್ದರೂ ವೇದಕ್ಕೆ ಕನಿಷ್ಠ ಮೂರು ಅರ್ಥಗಳಿವೆ—ಎಂಬ ಪ್ರಮೇಯವನ್ನು ಇಲ್ಲಿಯ ವಿದ್ವಾಂಸರಿಗೆ ತಿಳಿಯಪಡಿಸುವುದಕ್ಕಾಗಿಯೇ ಆ ಸೂಕ್ತಕ್ಕೆ ಬೇರೊಂದು ಅರ್ಥ ಹೇಳುವುದರ ಮೂಲಕ ಅದಕ್ಕೆ ಇಲ್ಲಿಯ ವಿದ್ವಾಂಸರ ಆಕ್ಷೇಪದ ಹಿನ್ನೆಲೆಯಾಗಿ ಆ ಪ್ರಮೇಯವನ್ನು ಪ್ರಸ್ತುತಪಡಿಸಿದರು—ಎಂದು ಪ್ರತಿಪಾದಿಸಿದ ಪ್ರಭಂಜನಾಚಾರ್ಯರು ವಿಷ್ಣುಸಹಸ್ರನಾಮದ ಒಂದು ನಾಮದ ಕೆಲವು ಅರ್ಥಗಳನ್ನು ತಿಳಿಸಿ, ಅಷ್ಟರಿಂದಲೇ 'ಸಕಲಜ್ಞ'—ಎಂಬ ಬಿರುದನ್ನು ಶ್ರೀಮದಾಚಾರ್ಯರು ಇಲ್ಲಿಯ ವಿದ್ವಾಂಸರಿಂದ ಪಡೆದುಕೊಂಡ ಸ್ಥಳ ಇದಾಗಿದೆ ಎಂದು ತಿಳಿಸಿದರು. ವಿಷ್ಣುಸಹಸ್ರನಾಮದ ವಿಶ್ವನಾಮಕ್ಕೆ ಹತ್ತಾರು ಅರ್ಥ

ಗಳನ್ನು ಪ್ರತಿಪಾದಿಸಿ ವಿಷ್ಣುಸರ್ವೋತ್ತಮತ್ವವನ್ನು ಸಮರ್ಥಿಸಿದ್ದ ಶ್ರೀಮದಾಚಾರ್ಯರು, ಶ್ರೀ ವಿಷ್ಣುವಿನ ಪ್ರತಿಮೆಯನ್ನು ಪ್ರತಿಷ್ಠಾಪಿಸುವುದರ ಮೂಲಕವೂ ವಿಷ್ಣುವಿನ ಪಾರಮ್ಯವನ್ನು ಸಾರಿರುವರೆಂದು ಶ್ರೀ ಪ್ರಭಂಜನಾಚಾರ್ಯರು ಅಭಿಪ್ರಾಯಪಟ್ಟರು.

ಬಂದ ಯಾತ್ರಿಕರಿಗೆ ಶ್ರೀ ದೇವಾಲಯದ ಪರವಾಗಿ ಧನ್ಯವಾದವನ್ನರ್ಪಿಸಿದ ಅಲ್ಲಿಯೆ ಶರಣಂತಾಯ ಶ್ರೀ ಗಣೇಶರಾವ್ ಇವರ "ಮುಂದೇನು ? ಮುಂದೇನು ? —ಎಂಬುದಾಗಿ ಪ್ರಶ್ನೆಗಳ ಗೊಂದಲ ಪ್ರಪಂಚದಲ್ಲಿಯೇ ಮುಳುಗಿಸುವ ಇಂದಿನ 'ಭೌತಿಕ ವಿಚಾರ'ಗಳಿಂದ ದೊರಕದ ತೃಪ್ತಿ, ನೆಮ್ಮದಿ ಪೂರ್ಣವಿರಾಮಸ್ವರೂಪದ ಆಧ್ಯಾತ್ಮಿಕ ವಿಚಾರಗಳಿಂದ, ಪ್ರವೃತ್ತಿಗಳಿಂದ ದೊರಕಬಲ್ಲದು" —ಎಂಬ ಅಭಿಪ್ರಾಯದ ಭಾವನಾಪರವಾದ ಮಾತುಗಳನ್ನು ಅನೇಕ ಯಾತ್ರಿಕರು ಮೆಚ್ಚಿಕೊಂಡರು.

## ಪಯಸ್ವಿನೀ ನದಿಯಲ್ಲಿ ಆಕಸ್ಮಿಕ ಸ್ನಾನ

ಅಡೂರು ಮಹಾಲಿಂಗೇಶ್ವರನ ದೇವಾಲಯ ಪಯಸ್ವಿನೀ ನದಿಯ ತೀರದಲ್ಲಿರುವಂತಹದ್ದು. ಆದ್ದರಿಂದ ಶ್ರೀ ವಿದ್ಯಾಮಾನ್ಯತೀರ್ಥರು ತಮ್ಮ ಪ್ರವಚನದಲ್ಲಿ ತೀರ್ಥಪ್ರಬಂಧದಲ್ಲಿ ತಿಳಿಸಿದಂತೆ ಪಯಸ್ವಿನೀ ನದಿಯಲ್ಲಿ ಪರಮಾತ್ಮ ವಿಶೇಷವಾಗಿ ಸನ್ನಿಹಿತನಾಗಿರುವನು. ಇಲ್ಲದಿದ್ದಲ್ಲಿ ಪರಮಾತ್ಮನ ಪ್ರೇಯಸಿಯಾದ ದುರ್ಗಾದೇವಿ ಬೇರೆ ಸ್ಥಳವನ್ನು ಬಿಟ್ಟು ಇದರ ತೀರದಲ್ಲಿಯೇ ಯಾಕೆ ಅವತಾರ ತಾಳಿರುವಳು ? ಎಂದು ಪಯಸ್ವಿನೀ ನದಿಯ ಹಿರಿಮೆಯನ್ನು ಪ್ರಸ್ತಾಪಿಸಿದ್ದರು.

ನಿಯೋಜಿತ ಕಾರ್ಯಕ್ರಮದಂತೆ ಅಡೂರಿನಿಂದ ಕಟ್ಟೀಲಕ್ಕೆ ಹೋಗಬೇಕಿತ್ತು. ಆದರೆ ವಾಹನವನ್ನು ಏರುತ್ತಲೇ ಶ್ರೀ ವಿದ್ಯಾಮಾನ್ಯತೀರ್ಥರು ತಿಳಿಸಿದರು— 'ಪಯಸ್ವಿನೀ ನದಿಯಲ್ಲಿ ಸ್ನಾನ ಮಾಡಬೇಕು'—ಎಂದು. ಪ್ರಾಯಶಃ ಅದರ ಮಹಿಮೆಯನ್ನು ಪ್ರಸ್ತಾಪಿಸುತ್ತಲೇ ಅದರಲ್ಲಿ ಅವಗಾಹನ ಸ್ನಾನ ನಡೆಸಬೇಕೆಂಬ ಸದಿಚ್ಛೆ ಅವರಲ್ಲಿ ರೂಪುಗೊಳ್ಳುತ್ತ ಇದ್ದಿದ್ದಿರಬೇಕು. ವಿಳಂಬವಾಗುವುದಾದರೆ ಕಟ್ಟೀಲಕ್ಕೆ ಮರುದಿನ ಹೋಗುವುದೆಂದು ತೀರ್ಮಾನಿಸಲಾಯಿತು. ಆಗ ವೈಶಾಖ ಮಾಸವಾದುದರಿಂದ ಪಯಸ್ವಿನೀ ಅಲ್ಲಲ್ಲಿ ನೀರಿನ ಮಡುಗಳನ್ನು ಹೊಂದಿದ್ದಳೇ ಹೊರತು ಪ್ರವಾಹ ರೂಪದಲ್ಲಿ ಹರಿಯುತ್ತಿದ್ದಿಲ್ಲ. ಆದರೂ ನಮ್ಮನ್ನು ಅಲ್ಲಿಗೆ ಕರೆದೊಯ್ದಿದ್ದ ಶ್ರೀ ಗೋಪಾಲಕೃಷ್ಣ ವೈಲಾಯರು ಸ್ನಾನಕ್ಕೆ ಯೋಗ್ಯವಾದ ಮಡುವಿನ ಬಳಿಗೆ ತಮ್ಮ ಜೀಪಿನ ಮೂಲಕ ಶ್ರೀಪಾದರನ್ನು ಕರೆದೊಯ್ದರು. ಸ್ನಾನಕ್ಕೆ ಅಷ್ಟೊಂದು ಸಿದ್ಧತೆ ಇಲ್ಲದಿದ್ದರೂ ಶ್ರೀಪಾದರೂ, ಉಳಿದ ಯಾತ್ರಿಕ

ರೂ ಪಯಸ್ವಿನೀಯಲ್ಲಿ ಮುಳುಗಿದರು. ಹೀಗೆ ಪಯಸ್ವಿನೀ ನದಿಯ ಸ್ನಾನ; ಹಾಗೂ ಅಲ್ಲಿ ನಡೆಸಿದ ಸಕಾಲಿಕ ಸಂಧ್ಯಾವಂದನ ತೀರಾ ಆಕಸ್ಮಿಕ ಎನ್ನುವಂತಿತ್ತು.

## ಪೂಜೆಯ ಬಳಿಕ ಪ್ರವಚನ

ಅಲ್ಲಿ ಸ್ನಾನ ಮುಗಿಯುವಾಗಲೇ ಸಂಜೆ 6 ಗಂಟೆಗೆ ಹತ್ತಿರವಾಗುತ್ತಿದ್ದುದರಿಂದ 'ಕಟ್ಟಿಲ'ಕ್ಕೆ ಮರುದಿನವೇ ಹೋಗುವುದೆಂದು ನಿಶ್ಚಯಿಸಿ, ಅಲ್ಲಿಂದ ನೇರವಾಗಿ ಕೋಡಿಪಾಡಿ ಜನಾರ್ದನ ದೇವಾಲಯಕ್ಕೆ ಹಿಂತಿರುಗಲಾಯಿತು.

'ಸಂದರ್ಶನ'ಕ್ಕೆ ಪ್ರಾಶಸ್ತ್ಯ ನೀಡಿ ಅದುವರೆಗಿನ ದಿನಗಳಲ್ಲಿ ಸಂಕ್ಷಿಪ್ತವಾಗಿ ಪೂರೈಸುತ್ತಿದ್ದ ಶ್ರೀ ಮಠದ ರಾತ್ರಿ ಪೂಜೆಯನ್ನು ಅಂದು ವಿಸ್ತಾರವಾಗಿಯೇ ನಡೆಸಲಾಯಿತು. ಶ್ರೀ ವಾದಿರಾಜ ಶ್ರೀಪಾದರು ಪ್ರಸ್ತುತಪಡಿಸಿದ್ದ ಹರಿನಾಮ ಸಂಕೀರ್ತನೆ ಹಾಗೂ ನರ್ತನಗಳನ್ನು ರಾತ್ರಿಪೂಜೆಯ ಅಂಗವಾಗಿ ಶ್ರೀ ಮಠದ ವಿದ್ಯಾರ್ಥಿಗಳು ಹಾಗೂ ಪರಿಚಾರಕರು ಸೇರಿ ಆಕರ್ಷಕವಾಗಿ ನಡೆಸಿಕೊಟ್ಟರು.

ರಾತ್ರಿಪೂಜೆ ನಡೆದ ಶ್ರೀ ಜನಾರ್ದನ ಸ್ವಾಮಿಯ ಎದುರಿನ ಚಾವಡಿಯಲ್ಲಿಯೇ ಪೂಜೆಯ ಬಳಿಕ ಪ್ರವಚನ ನಡೆಯಿತು.

ಶ್ರೀ ಪ್ರಭಂಜನಾಚಾರ್ಯರು ಉತ್ತರಭಾರತದಲ್ಲಿ ಪ್ರಯಾಗ ಇದ್ದಂತೆ ದಕ್ಷಿಣ ಭಾರತದಲ್ಲಿ ಜನಾರ್ದನ ಸ್ವಾಮಿಯ ಈ ಕೋಡಿಪಾಡಿ ಕ್ಷೇತ್ರ ಪಿತೃಗಳ ಸದ್ಗತಿಗೆ ಪ್ರಯೋಜಕವಾಗಿದೆ—ಎಂದು ಪ್ರತಿಪಾದಿಸಿದರು.

ಶ್ರುತಿಗಳಿಗೆ ಪೂರ್ವಾಪರ ವಿರೋಧ ಬಾರದಂತೆ ವ್ಯಾಖ್ಯಾನಿಸಿದವರು ಶ್ರೀಮದಾಚಾರ್ಯರಾದುದರಿಂದ, ಅವರು ಉತ್ತಮ ಗುರುಗಳೆಂದು ಪ್ರತಿಪಾದಿಸಿದ ಶ್ರೀ ವಿದ್ಯಾಮಾನ್ಯತೀರ್ಥರು 'ಬೃಹದಾರಣ್ಯಕೋಪನಿಷತ್ತಿನ 'ಅಥ ಯೋಽನ್ಯಾಂ ದೇವತಾಮುಪಾಸ್ತೇ ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ ಯಥಾ ಪಶುಃ" —ಎಂಬ ಮಾತನ್ನು ಪೂರ್ವ ವಿಚಾರಕ್ಕೆ ಹೊಂದಿಕೆಯಾಗುವಂತೆ ವ್ಯಾಖ್ಯಾನಿಸಿರುವ ಸ್ವಾರಸ್ಯವನ್ನು ವಿವರಿಸಿದರು.

ತಾತ್ವಿಕವಾಗಿ ವಿರೋಧಿಗಳ ತಾತ್ವಿಕ ವಿರೋಧಗಳ ಪರಿಹಾರಕ್ಕಾಗಿ ರಾಜಾಶ್ರಯ ಹಾಗೂ ವಿದ್ವದಾಶ್ರಯಗಳಾದ ಸ್ಥಳಗಳನ್ನೇ ಶ್ರೀ ಮಧ್ವರು ಹೆಚ್ಚಾಗಿ ಆಯ್ದುಕೊಳ್ಳುತ್ತಿದ್ದರಿಂದ ಶ್ರೀ ವಿದ್ಯಾಧೀಶತೀರ್ಥರು ಕೋಡಿಪಾಡಿಯಲ್ಲಿ ಕುಂಬ್ಳೆಯ ಜಯಸಿಂಹ ರಾಜನ ಆಶ್ರಯವಿತ್ತು; ವಿದ್ವಾಂಸರೂ ವಿಶೇಷವಾಗಿ ಇದ್ದರು. ಆದ್ದರಿಂದಲೇ ಇಲ್ಲೇ ಚಾತುರ್ಮಾಸ್ಯ ವ್ರತವನ್ನು ಕೈಗೊಂಡು ಅನೇಕ ವಿದ್ವಾಂಸರನ್ನು ತಾತ್ವಿಕವಾಗಿ ಪರಿವರ್ತಿಸಿದ್ದರು. ಆದರೂ ತಾಮಸ ಸ್ವಭಾವದ ಕೆಲವರು ಪರಿವರ್ತಿತರಾಗದೆಯೇ, ಅವರಿಗೆ ವಿರೋಧಿಗಳಾಗಿಯೇ ಇದ್ದರು

ಎಂದು ಪ್ರತಿಪಾದಿಸಿದರು.

## ಪಾರಂತಿಯಲ್ಲಿ ಪಂಚರೂಪಿ ಮುರರಿಪುವಿನ ಸಂದರ್ಶನ

9-4-96ರಂದು ಬೆಳಿಗ್ಗೆ ಕೋಡಿಪಾಡಿಯಿಂದ ಈಗ ಮುದ್ಯ ಎಂದು ಕರೆಸಿಕೊಳ್ಳುವ ಪಾರಂತಿಗೆ ಹೋಗಲಾಯಿತು.

ಪಾರಂತಿಯ ಪಂಚಲಿಂಗೇಶ್ವರ ದೇವಾಲಯ ಅರ್ಚಕರಾದ ಉಡುಪರ ಮನೆಯು ಪಕ್ಕದಲ್ಲಿಯೇ ಇದೆ. ಅರ್ಚಕರು ಇದ್ದಿಲ್ಲ. ಅವರ ಪುತ್ರ ಪಕ್ಕದಲ್ಲಿರುವ ದೇವಾಲಯಕ್ಕೆ ಕರೆದೊಯ್ದರು. ಸುಮಾರು ಅರ್ವತ್ತು ಅಡಿ ಎತ್ತರದ ಗುಡ್ಡದ ಮೇಲೆ ಇರುವ ದೇವಾಲಯವನ್ನು ನಲ್ವತ್ತಾರು ಮೆಟ್ಟಲುಗಳನ್ನು ಏರಿ ಪ್ರವೇಶಿಸಲಾಯಿತು. ಒಂದು ಶಿಲೆಯ ಗರ್ಭಗುಡಿ. ಎದುರಿಗೆ ಇತ್ತೀಚೆಗೆ ಕಟ್ಟಿಸಿದ ಒಂದು ಚಾವಡಿ; ಪಕ್ಕದಲ್ಲಿ ಒಂದು ಕೊಠಡಿ ಇಷ್ಟೇ ಅಲ್ಲದೆ, ಗರ್ಭಗುಡಿಯೊಳಗೆ ಪಂಚಲಿಂಗಗಳನ್ನು ವಾಸುದೇವಾದಿ ಪಂಚರೂಪಿ ಪರಮಾತ್ಮನ ಪ್ರತೀಕಗಳನ್ನಾಗಿ ಶ್ರೀ ಭೀಮಸೇನನಿಂದ ಪ್ರತಿಷ್ಠಾಪಿಸಿದನ್ನು ನೋಡಲಾಯಿತು. ಶ್ರೀ ವಿದ್ಯಾಧೀಶ ತೀರ್ಥರು ಮಂಗಳಾರತಿ ಬೆಳಗಿದರು. "ಭೀಮತ್ವೇ ಸಹ ಸಹಜೈಃ ಪ್ರತಿಷ್ಠಿತಃ ಪ್ರಾಕ್...." ಎಂಬ ಅಲ್ಲಿಯ ಉಲ್ಲೇಖವುಳ್ಳ ಸುಮಧ್ವವಿಜಯದ ಶ್ಲೋಕಗಳನ್ನು ಸ್ಪಷ್ಟವಾಗಿ ಪಠಿಸಿ ಅನುಸಂಧಾನವನ್ನು ತಂದುಕೊಳ್ಳಲಾಯಿತು. ದೇವಾಲಯದ ಪ್ರಾಂಗಣದಲ್ಲಿ ಎಡಬದಿ ಒಂದು ನೆಲ್ಲೀಕಾಯಿ ಮರ ಇದೆ. ಅದು ಶ್ರೀ ಮಧ್ವರ ಸಂಪರ್ಕಕ್ಕೊಳಗಾದದ್ದು—ಎನ್ನಲಾಗಿದೆ. ಅರ್ಚಕರ ಪುತ್ರ ತಾವು ಭಾಗವತ ಸಂಪ್ರದಾಯಕ್ಕನುಗುಣವಾಗಿ ಪೂಜಿಸುವುದೆಂದು ತಿಳಿಸಿದರು. ದೇವಸ್ಥಾನದ ಪೂಜೆಗಾಗಿ ಏನೂ ಆದಾಯವಿಲ್ಲ. ಊರಿನವರದ್ದೂ ಅಷ್ಟೊಂದು ಸಹಕಾರವಿಲ್ಲ. ಆದರೂ ತಾವು ಹಿರಿಯರಿಂದ ಬಂದ ಪೂಜೆಯನ್ನು ನಿಲ್ಲಿಸಬಾರದೆಂದು ಮುಂದುವರಿಸುತ್ತಿರುವುದಾಗಿ ತಿಳಿಸಿದರು.

ಪಾಂಡವರು ವನವಾಸದ ಸಂದರ್ಭದಲ್ಲಿ ದಕ್ಷಿಣದ ಕಡೆಗೂ ಬಂದಿದ್ದು, ಕುಂಭಾಸುರನನ್ನು ಸಂಹರಿಸಿದ್ದಂತೆ, ಇಲ್ಲಿಗೆ ಬಂದು ಈ ಪ್ರತಿಷ್ಠೆಯನ್ನು ನಡೆಸಿರುರೆಂದ ಶ್ರೀ ಪ್ರಭಂಜನಾಚಾರ್ಯರು, ಹೀಗೆ ತಾವು ಭೀಮನಾಗಿದ್ದಾಗ ನಡೆಸಿದ ಪ್ರತಿಷ್ಠೆಯನ್ನು ಸ್ಮರಿಸಿಕೊಂಡ ಆಚಾರ್ಯರು ಆಗ ನಿಂತುಹೋಗಿದ್ದ ಅಲ್ಲಿಯ ಪೂಜೆಯ ವ್ಯವಸ್ಥೆಯನ್ನು ಪೂರೈಸಿದರೆಂದು ತಿಳಿಸಿದರು.

ಶ್ರೀಪಾದರು, ಪ್ರಭಂಜನಾಚಾರ್ಯರು ಮತ್ತೆ ಕೆಲವರು ಸಮಾಲೋಚಿಸುತ್ತ ಈಗ ಮತ್ತೆ ಶಿಥಿಲಗೊಂಡಿರುವ ಇಲ್ಲಿಯ ಪೂಜೆಯ ವ್ಯವಸ್ಥೆಯನ್ನು ಭದ್ರಗೊಳಿಸಬೇಕು; ಹಾಗೆಯೇ ವೈಷ್ಣವಪದ್ಧತಿಗನುಗುಣವಾಗಿ ಪೂಜೆ ನಡೆಯುವಂತೆ

ಮಾಡಬೇಕೆಂದು ನಿರ್ಣಯಿಸಿ, ಆರ್ಥಿಕ ಭದ್ರತೆಗಾಗಿ ನಿತ್ಯಪೂಜಾನಿಧಿಯೋಜನೆಯನ್ನು ಹಮ್ಮಿಕೊಳ್ಳಬೇಕೆಂದು ಅಂದುಕೊಂಡರು.

### ಕೃಷ್ಣಾಮೃತ ಮಹಾರ್ಣವ ರೂಪುಗೊಂಡ ಕ್ಷೇತ್ರ: ಕೊಕ್ಕಡ

ಪಾರಂತಿಯ ಪಂಚಲಿಂಗೇಶ್ವರನಲ್ಲಿಂದ ವೈದ್ಯನಾಥೇಶ್ವರ ದೇವಾಲಯಕ್ಕೆ ಹೋಗಲಾಯಿತು. ಇಲ್ಲಿಯ ಆರಾಧ್ಯ ದೇವತೆ ಮಹಾಲಿಂಗೇಶ್ವರ. ಅವನಲ್ಲಿ ಧನ್ವಂತರಿಯ ವಿಶೇಷ ಸನ್ನಿಧಾನ ಇರುವುದರಿಂದ ಅವನು ವೈದ್ಯನಾಥ ಎಂದೇ ಪರಿಗಣಿಸಲ್ಪಟ್ಟಿರುವನು. ದೇವಾಲಯದ ಹೊರಗೆ ಚಿಕ್ಕ ವಿಷ್ಣು ದೇವಾಲಯವಿದ್ದು, ಇಲ್ಲಿಯ ಶ್ರೀ ವಿಷ್ಣುವಿನ ಪ್ರತಿಮೆ ಶ್ರೀ ಮಧ್ವರಿಂದ ಪ್ರತಿಷ್ಠಿತವಾದುದೆಂಬ ಐತಿಹ್ಯವಿದೆ. ರುದ್ರ ದೇವಾಲಯದಲ್ಲಿ ಭಿಕ್ಷೆ ಸ್ವೀಕರಿಸುವುದಿಲ್ಲ ಎಂದ ಶ್ರೀಮದಾಚಾರ್ಯರು ಹೇಗಾದರೂ ಭಿಕ್ಷೆ ಸ್ವೀಕರಿಸುವಂತಾಗಬೇಕೆಂದು ಇಲ್ಲಿ ಶ್ರೀ ವಿಷ್ಣುವಿನ ಪ್ರತಿಷ್ಠೆಯನ್ನು ನಡೆಸಲಾಗಿದೆ ಎಂದೂ ಇಲ್ಲಿ ಹೇಳಲಾಗುವುದು.

ಕೃಷ್ಣಾಮೃತ ಮಹಾರ್ಣವದಲ್ಲಿ ಪ್ರಸ್ತುತಗಳಾದ ಸಾಲಿಗ್ರಾಮಾರ್ಚನೆಯೇ ಮುಂತಾದ ಪ್ರಮೇಯಗಳ ಕುರಿತು ವಿವರಿಸುತ್ತ ಶ್ರೀ ಪ್ರಭಂಜನಾಚಾರ್ಯರು, ವೈದ್ಯನಾಥನ ಸನ್ನಿಧಿಯಲ್ಲಿ ವೈದ್ಯಶಾಸ್ತ್ರಕ್ಕೆ ಸಮ್ಮತವಾಗುವಂತೆ ಏಕಾದಶೀವ್ರತಾಚರಣೆಯೇ ಮುಂತಾದ ಪ್ರಮೇಯಗಳು ಕೃಷ್ಣಾಮೃತಮಹಾರ್ಣವದಲ್ಲಿ ಸಮರ್ಥಿತಗಳಾಗಿರುವುದನ್ನು ತೋರಿಸಿಕೊಟ್ಟರು.

### ಭಾಗವತ ಸಂಪ್ರದಾಯದ ಪರಿವರ್ತನೆಗಾಗಿ<br>ಕೃಷ್ಣಾಮೃತ ಮಹಾರ್ಣವ

ಮಧ್ಯಾಹ್ನ ಭೋಜನವಾದ ಬಳಿಕ ಶ್ರೀ ವಿದ್ಯಾಧೀಶತೀರ್ಥರು ಅನುಗ್ರಹಿಸಿದ ಪ್ರವಚನದಲ್ಲಿ 'ಇಡೆಪಾಡಿತ್ತಾಯ' ಎಂಬ ಭಕ್ತನಿಗಾಗಿ ಶ್ರೀಮದಾಚಾರ್ಯರು ನಿರ್ಮಿಸಿರುವ ಕೃಷ್ಣಾಮೃತಮಹಾರ್ಣವದಲ್ಲಿ ಗೋಪೀಚಂದನಧಾರಣೆ, ಅಂಗಾರಕ ಧಾರಣೆ, ಸಾಲಿಗ್ರಾಮ ಪೂಜೆ, ಏಕಾದಶೀ ವ್ರತಾಚರಣೆ ಮುಂತಾದವುಗಳನ್ನು ಪುರಾಣ ವಾಕ್ಯಗಳಿಂದ ಪ್ರತಿಪಾದಿಸಿ ಭಾಗವತ ಸಂಪ್ರದಾಯದ ಭಕ್ತರು ವೈಷ್ಣವ ಸಂಪ್ರದಾಯಕ್ಕೆ ಪರಿವರ್ತನೆಗೊಳ್ಳುವಂತೆ ಮಾಡಲಾಗಿದೆ ಎಂದು ಅಭಿಪ್ರಾಯಪಟ್ಟರು.

ಶ್ರೀ ವಿದ್ಯಾಮಾನ್ಯತೀರ್ಥರು ತಮ್ಮ ಪ್ರವಚನದಲ್ಲಿ 'ಅರ್ಚಿತಃ ಸಂಸ್ಮೃತೋ ಧ್ಯಾತಃ....' —ಎಂಬ ಕೃಷ್ಣಾಮೃತ ಮಹಾರ್ಣವದ ಮೊದಲ ಪದ್ಯಕ್ಕೆ ಪ್ರಾಸಂಗಿಕವಾಗಿ ಸಂಬಂಧಿಸಿದಂತೆ ಭಗವಂತನೇ ನಮ್ಮ ಸುಖದುಃಖಗಳಿಗೆ ಕಾರಣ ಎಂದು ಸಮರ್ಥಿಸುತ್ತ ಜೀವನದಲ್ಲಿ ಕಾಣಿಸುವ ದುಃಖಕ್ಕೆ ಯಾರ್ಯಾರೋ ಪ್ರಯೋಜಕ

ರೆಂದು ಆರೋಪಿಸದೆ, 'ತಸ್ಯೈಕಸ್ಯ ಮಮತ್ವಂ ಹಿ' —ಎಂದಿರುವಂತೆ ಅವನೊಬ್ಬನೇ ಸ್ವತಂತ್ರನೆಂದು ವಿಶ್ಲೇಷಿಸಿಕೊಂಡು ಅಹಂಕಾರವನ್ನು ಬಿಡಬೇಕೆಂದು ಕರೆ ನೀಡಿದರು.

## ಸುವರ್ಣದಂತೆ ಸದ್‌ಗ್ರಂಥಗಳು ಸಂರಕ್ಷಣೀಯವಾದವು

ಅಂದು ಮಧ್ಯಾಹ್ನದ ಮೇಲೆ ಅಲ್ಲಿಂದ ಕಟ್ಟ್ರಲಕ್ಕೆ ಪಯಣ. 'ಸಾಲೆತ್ತೂರು' ಎಂದು ಕರೆಸಿಕೊಳ್ಳುವ ಈ ಪ್ರದೇಶಕ್ಕೆ ತಲುಪುವಾಗ ಸಂಜೆ 5 ಗಂಟೆ. ಅಲ್ಲಿರುವ ಅದಮಾರು ಮಠಕ್ಕೆ ಮೊದಲು ಹೋಗಿ, ಅಲ್ಲಿಂದ ಉತ್ತರಕ್ಕೆ ಅರ್ಧ ಫರ್ಲಾಂಗಷ್ಟು ದೂರದಲ್ಲಿರುವ ಸರ್ವಮೂಲಗ್ರಂಥಗಳನ್ನು ಭೂಗತಗಳನ್ನಾಗಿಸಿದ ಕ್ಷೇತ್ರಕ್ಕೆ ಹೋಗಲಾಯಿತು. ಸುತ್ತ ಪ್ರಾಕಾರ ಕಟ್ಟಲಾಗಿದೆ. ಅದರ ಮಧ್ಯದಲ್ಲಿ ಎರಡು ಅಡಿಗಳಷ್ಟು ಆಳದ ಒಂದು ಪುಟ್ಟ ಕುಂಡಿಕೆ. ಆ ಕುಂಡಿಕೆ ಸುತ್ತ ಕುಳಿತುಕೊಳ್ಳಲಾಯಿತು. ಕುಂಡಿಕೆಯಲ್ಲಿ ತುಂಬಿದ್ದ ತರಗೆಲೆಗಳನ್ನೆಲ್ಲ ತೆಗೆಯಲಾಯಿತು. ಶ್ರೀ ಪಿ.ವಿ. ಆರ್ ಕೆ. ಪ್ರಸಾದ್ ಗ್ರಂಥಗಳ ಸಂರಕ್ಷಣೆಗಾಗಿ ಭೂಮಿಯಲ್ಲಿ ಹೂತಿಡುವ ಪದ್ಧತಿ ಹಿಂದೆ ಇತ್ತೆಂಬುದನ್ನು ಪ್ರಸ್ತಾಪಿಸಿ, ತಿರುಪತಿ ದೇವಾಲಯದ ಗೋಡೆಗಳಲ್ಲಿ ಅನ್ನಮಾಚಾರ್ಯರ ಕೃತಿಗಳನ್ನು ಹಾಗೆ ಸ್ಥಾಪಿಸಿದ್ದುದನ್ನು ಉಲ್ಲೇಖಿಸಿದರು.

ಸರ್ವಮೂಲ ಗ್ರಂಥಗಳನ್ನು ಭೂಗತಗಳನ್ನಾಗಿಸಿದುದರ ಹಿನ್ನೆಲೆ ಮತ್ತು ಓಚಿತ್ಯವನ್ನು ಪ್ರತಿಪಾದಿಸಿದ ಶ್ರೀ ಪ್ರಭಂಜನಾಚಾರ್ಯರು ಗ್ರಂಥಗಳ ಒಂದು ಪ್ರತಿಯನ್ನು ಅಧ್ಯಯನಕ್ಕಾಗಿ ಬಳಸಿಕೊಳ್ಳಬೇಕಾದರೆ, ಇನ್ನೊಂದು ಪ್ರತಿಯನ್ನು ಸಂರಕ್ಷಿಸಿಡಬೇಕೆಂದು ಈ ಮೂಲಕ ಆಚಾರ್ಯರು ಸೂಚ್ಯವಾಗಿ ಸಂದೇಶಿಸಿರುವರೆಂದು ತಿಳಿಸಿದರು. ಶ್ರೀ ವಿದ್ಯಾಧೀಶತೀರ್ಥರು ಸರ್ವಮೂಲ ಗ್ರಂಥಗಳ ವೈಶಿಷ್ಟ್ಯವನ್ನು ಪ್ರತಿಪಾದಿಸುತ್ತ, ಸರ್ವ ಮೂಲ ಗ್ರಂಥಗಳು ಸಕಲಸಚ್ಛಾಸ್ತ್ರಗಳಿಗೂ ಮೂಲಗಳಾಗಿರುವಂತೆ, ಪೂರ್ಣನಾಗಿದ್ದು, ಸರ್ವ ಎನಿಸುವ ಭಗವಂತನ ಅರಿವಿಗೆ ಮೂಲವಾಗಿರುವುದರಿಂದಲೂ ಸರ್ವಮೂಲಗಳೆನಿಸಿವೆ ಎಂದು ತಿಳಿಸಿದರು.

ಸುವರ್ಣವನ್ನು ಭೂಮಿಯಲ್ಲಿ ಹೂತಿಟ್ಟು ಸಂರಕ್ಷಿಸುತ್ತಿದ್ದರು. ಅದರಂತೆ ಸರ್ವಮೂಲವನ್ನೂ ಹೂತಿಟ್ಟಿರುವ ಶ್ರೀಮದಾಚಾರ್ಯರು ಸರ್ವಮೂಲಗ್ರಂಥಗಳು ಸುವರ್ಣದಂತೆ ಸಂರಕ್ಷಣೀಯವಾದವುಗಳೆಂದು ಸಂದೇಶಿಸಿರವರೆಂದು ಶ್ರೀ ವಿದ್ಯಾಮಾನ್ಯತೀರ್ಥರು ಸಮರ್ಥಿಸಿದರು.

ಕುಂಡಿಕೆಯ ಮೃತ್ತಿಕೆ ಸರ್ವಮೂಲ ಗ್ರಂಥಗಳ ಸಂಪರ್ಕದಿಂದ ಪರಮ ಪವಿತ್ರವಾದುದೆಂದು ಅದನ್ನು ಎಲ್ಲರಿಂದ ಶಿರಸ್ಸಿನಲ್ಲಿ ಧರಿಸಲಾಯಿತು ಸರ್ವ

ಮೂಲ ಗ್ರಂಥಗಳಲ್ಲಿ ಸನ್ನಿಹಿತರಾದ ಶ್ರೀ ವೇದವ್ಯಾಸರಿಗೆ ಶ್ರೀ ವಿದ್ಯಾಮಾನ್ಯ ತೀರ್ಥರು ಮಂಗಳಾರತಿ ಎತ್ತಿದರು.

## ಕೋಡಿಪಾಡಿಯಲ್ಲಿ ವೈಶಿಷ್ಟ್ಯಪೂರ್ಣ ಸಮಾರೋಪ

ಕಟ್ಟಿಲದಿಂದ ಸುಮಾರು 8 ಗಂಟೆಗೆ ಕೋಡಿಪಾಡಿ ಜನಾರ್ದನ ದೇವಾಲಯಕ್ಕೆ ಹಿಂತಿರುಗಲಾಯಿತು. ಏಳು ದಿನಗಳ ಯಾತ್ರೆಯಲ್ಲಿ ತಂಗಲು ಹೆಚ್ಚಾಗಿ ಬಳಸಿ ಕೊಂಡದ್ದು ಕೋಡಿಪಾಡಿಯನ್ನೇ. ಶ್ರೀ ವಿಷ್ಣುಮೂರ್ತಿ ಎರ್ಕಾಡಿತ್ತಾಯರು ಸ್ಥಳೀಯ ಮಹನೀಯರ ಸಹಕಾರದೊಂದಿಗೆ ಉತ್ತಮ ವ್ಯವಸ್ಥೆಯನ್ನು ಕಲ್ಪಿಸಿ ದ್ದರು. ಹೀಗೆ ವ್ಯಾಪಕವಾಗಿ ಪಡೆದ ಆ ದೇವಾಲಯದ ಸಂಪರ್ಕವನ್ನು ಆತ್ಮೀಯವಾಗಿ ಸಮಾರೋಪಗೊಳಿಸಬೇಕೆಂದು ಸಮಾರಂಭವನ್ನು ಸಂಯೋಜಿಸ ಲಾಗಿತ್ತು.

ಶ್ರೀ ಪ್ರಭಂಜನಾಚಾರ್ಯರು ತಮ್ಮ ಪ್ರವಚನದಲ್ಲಿ ಶ್ರೀಮದಾಚಾರ್ಯರ ಕೆಲವು ಮಹಿಮೆಗಳನ್ನೂ, ಅವುಗಳ ಹಿನ್ನೆಲೆಯನ್ನೂ ವಿವರಿಸಿದರಲ್ಲದೆ, ಶ್ರೀಮದಾಚಾರ್ಯರ ಸರ್ವಮೂಲದ ಒಂದೊಂದು ಗ್ರಂಥವೂ ಆ ಬಗೆಯ ಶಾಸ್ತ್ರ ಗಳಿಗೆಲ್ಲ ಮೂಲವಾದುದು, ಸದಾಚಾರಸ್ಮೃತಿ ಸಕಲ ಸದಾಚಾರಗಳಿಗೆ ಮೂಲ ದಂತಿದ್ದರೆ, ಕೃಷ್ಣಾಮೃತಮಹಾರ್ಣವ ಸಕಲವ್ರತಗಳಿಗೆ ಮೂಲ; ಯತಿಪ್ರಣವ ಕಲ್ಪ—ಸಕಲ ಯತಿಗಳ ಆಚಾರಗಳಿಗೆ ಮೂಲ ಹೀಗೆ ಚಿಕ್ಕ ಪುಟ್ಟ ಗ್ರಂಥವೂ ಮೂಲ ಎನಿಸುವಂತಹದ್ದೆಂದು ಪ್ರತಿಪಾದಿಸಿದರು.

## ಪಾರಂತಿಯ ನಿತ್ಯಪೂಜಾನಿಧಿ ಯೋಜನೆಯ ಪ್ರಸ್ತಾವ

ಶ್ರೀಮದಾಚಾರ್ಯರು ಪಾರಂತಿಯ ಪಂಚಲಿಂಗೇಶ್ವರ ದೇವಾಲಯಕ್ಕೆ ಹೋದಾಗ—ಅಲ್ಲಿ ಪೂಜೆಯ ವ್ಯವಸ್ಥೆ ನಿಂತಿತ್ತು. ಕೂಡಲೇ ಆಚಾರ್ಯರು ಅಲ್ಲಿಯ ಗ್ರಾಮದ ಅಧಿಕಾರಿಗಳನ್ನು ಕರೆತರಿಸಿ, ಅಲ್ಲಿಯ ಪೂಜೆ, ಉತ್ಸವಾದಿಗಳ ವ್ಯವಸ್ಥೆಯನ್ನು ಪುನರುಜ್ಜೀವನಗೊಳಿಸಿದರೆಂದು ಅವರ ಚರಿತ್ರೆಯಲ್ಲಿ ಉಲ್ಲೇಖ ವಿದೆ—ಎಂದು ಪ್ರಸ್ತಾಪಿಸಿದ ಶ್ರೀ ಪ್ರಭಂಜನಾಚಾರ್ಯರು ಹಾಗೆ ಪಾರಂತಿಯಲ್ಲಿ ಪೂಜೆಯ ವ್ಯವಸ್ಥೆಯನ್ನು ಮಾಡುವುದರ ಮೂಲಕ ಆಚಾರ್ಯರು ಯಾವು ದಾದರೂ ದೇವಾಲಯದಲ್ಲಿ ಪೂಜೆಯ ವ್ಯವಸ್ಥೆ ನಿಂತುಹೋಗಿದ್ದರೆ, ಅಥವಾ ಕ್ಷೀಣ ಸ್ಥಿತಿಯಲ್ಲಿದ್ದರೆ ಅದನ್ನು ಪುನರುಜ್ಜೀವನಗೊಳಿಸಬೇಕೆಂದು ಸೂಚಿಸಿರುವರು ಎಂದು ಪ್ರತಿಪಾದಿಸಿ, ಪಾರಂತಿಯ ಪಂಚಲಿಂಗೇಶ್ವರ ದೇವಾಲಯದಲ್ಲಿಯೇ ಪೂಜೆಯ ವ್ಯವಸ್ಥೆ ಶಿಥಿಲಗೊಂಡಿದ್ದು, ಅದಕ್ಕೆ ಬೇಕಾದ ಆರ್ಥಿಕ ನೆರವನ್ನು ನೀಡಿ ಭದ್ರಗೊಳಿಸಿದಲ್ಲಿ ಶ್ರೀಮದಾಚಾರ್ಯರು ಹಾಕಿಕೊಟ್ಟ ಪಾಠವನ್ನು ಅಳವಡಿಸು

ವುದರ ಮೂಲಕ ಅವರಿಗೆ ಗೌರವಸಲ್ಲಿಸಿದಂತಾಗುವುದು—ಎಂದು ಹೇಳಿದರು. ಅದಕ್ಕಾಗಿ ಪ್ರತಿನಿತ್ಯಕ್ಕೆ ಸುಮಾರು 25 ರೂ. ದೊರಕುವಂತೆ 'ನಿತ್ಯಪೂಜಾನಿಧಿ' ಯ ಯೋಜನೆಯನ್ನು ಹಮ್ಮಿಕೊಂಡಿದ್ದು, ಆ ಯೋಜನೆಗೆ ನೆರವು ನೀಡುವವರು ತಮ್ಮ ಹೆಸರಲ್ಲಿ 200 ರೂ. ಶಾಶ್ವತ ನಿಧಿಯಾಗಿ ಇಟ್ಟು, ಪ್ರತಿವರ್ಷ ತಾವು ಬಯಸಿದ ದಿನಗಲ್ಲಿ ತಮ್ಮ ವತಿಯಿಂದ ಪೂಜೆ ನಡೆಯುವಂತೆ ಮಾಡಬಹುದೆಂದು ವಿವರಿಸಿದರು.

ಪ್ರಥಮ ಮೊದಲ ವಂತಿಗೆಯಾಗಿ ಶ್ರೀ ವಿದ್ಯಾಮಾನ್ಯತೀರ್ಥರು 200 ರೂ. ಕೊಟ್ಟರು. ಕೂಡಲೇ ಸಭೆಯಲ್ಲಿ ಒಬ್ಬೊಬ್ಬರೇ ತಮ್ಮ ತಮ್ಮ ವಂತಿಗೆಯನ್ನು ಘೋಷಿಸಿದರು. ಸುಮಾರು ಇಪ್ಪತ್ತಕ್ಕಿಂತಲೂ ಅಧಿಕ ಭಕ್ತರು ತಮ್ಮ ದೇಣಿಗೆ ಯನ್ನು ಸಾರಿದರು. ಶ್ರೀ ಪಿ ವಿ ಆರ್ ಕೆ ಪ್ರಸಾದ್ ಎಲ್ಲರೂ ಕೊಟ್ಟ ಮೇಲೆ ಉಳಿಯುವ ಎಲ್ಲ ದಿನಗಳ ಬಾಬ್ತು ತಾವು ನೀಡುವುದಾಗಿ ತಿಳಿಸಿದರು.

ಶ್ರೀವಾದಾಚಾರ್ಯರು ಪಾರಂತಿಯ ಪೂಜೆಯ ವ್ಯವಸ್ಥೆಯನ್ನು ಅರ್ಧ ದಿನ ದಲ್ಲಿಯೇ ಪೂರೈಸಿದ್ದರೆ, ಅಂತಹ ಆಚಾರ್ಯರು ಪೂರ್ಣಾನುಗ್ರಹಕ್ಕೆ ಪಾತ್ರರಾದ ಶ್ರೀ ವಿದ್ಯಾಮಾನ್ಯತೀರ್ಥರ ನೇತೃತ್ವದಲ್ಲಿ ಅರ್ಧ ಹೊತ್ತಿನಲ್ಲಿಯೇ ಅಲ್ಲಿಯ ಪೂಜೆಗೆ ವ್ಯವಸ್ಥೆ ನಡೆದಂತಾಯಿತೆಂದು ಶ್ರೀ ಪ್ರಭಂಜನಾಚಾರ್ಯರು ಹೇಳಿದರು.

ಜೀವನೇ ಬ್ರಹ್ಮಸ್ವರೂಪ ಎಂಬ ಅದ್ವೈತ ತತ್ವದಲ್ಲಿರುವ ಅನೌಚಿತ್ಯವನ್ನು ಶ್ರೀ ವಿದ್ಯಾಮಾನ್ಯತೀರ್ಥರು ತಮ್ಮ ಪ್ರವಚನದಲ್ಲಿ ವಿಶದಪಡಿಸಿದರು.

ಶ್ರೀ ವಿದ್ಯಾಧೀಶತೀರ್ಥರು ಆ ಯೋಜನೆಯ ಪ್ರತಿಕ್ರಿಯೆಯ ಕುರಿತು ಅಭಿ ನಂದನೆಯನ್ನು ಸಲ್ಲಿಸಿದರು.

## 'ಕರ್ಮನಿರ್ಣಯ'ದ ನಿರ್ಮಾಣಕ್ಕೆ ಆಸರೆಯಾಗಿದ್ದ ಉಜಿರೆ

10-4-96ರಂದು ಬೆಳಿಗ್ಗೆ ಕೋಡಿಪಾಡಿಯ ಜನಾರ್ದನನಿಗೆ ವಂದಿಸಿ, ಅಲ್ಲಿಂದ ಉಜಿರೆಯ ಜನಾರ್ದನ ದೇವಾಲಯಕ್ಕೆ ಹೋಗಲಾಯಿತು. ಅಲ್ಲಿ ಸಾರ್ವ ಜನಿಕ ಸಭೆಗೆ ಏರ್ಪಾಟು ನಡೆದಿತ್ತು. ಶ್ರೀ ವಿದ್ಯಾಮಾನ್ಯತೀರ್ಥರ ಅಧ್ಯಕ್ಷತೆ ಯಲ್ಲಿ ಸಭೆ ನಡೆಯಿತು.

ಶ್ರೀ ವಿದ್ಯಾಮಾನ್ಯತೀರ್ಥರು 'ಕರ್ಮನಿರ್ಣಯ' ಗ್ರಂಥದ ರಚನೆಯ ಹಿನ್ನೆಲೆ ಯನ್ನು ತಿಳಿಸಿದರೆ, ಶ್ರೀ ವಿದ್ಯಾಧೀಶತೀರ್ಥರು ಕೃಷ್ಣಾವತಾರವನ್ನು ತಿಳಿಸುವ ಮಹಾಭಾರತದ ವಿಶ್ಲೇಷಣೆಯನ್ನು 'ಜನಾರ್ದನ' ನಾಮಾರೂಢವಾಗಿ ನಡೆಸಿದರು.

ಪಾಂಡಿತ್ಯದ ಜೊತೆಗೆ ಜಿಜ್ಞಾಸೆ ಇರಬೇಕು; ಅಹಂಕಾರ ಇರಬಾರದು ಎಂದು ಶ್ರೀ ಮಧ್ವಾಚಾರ್ಯರು ತೋರಿಸಿ ಕೊಟ್ಟ ಸ್ಥಳ 'ಉಜಿರೆ' ಎಂದ ಶ್ರೀ ಪ್ರಭಂಜನಾ ಚಾರ್ಯರು ಧರ್ಮಸ್ಥಳದ ಸಂದರ್ಶನದ ಜೊತೆಗೆ ಉಜಿರೆಯ ಜನಾರ್ದನ ದೇವಾ ಲಯದ ಸಂದರ್ಶನವೂ ಅವಿಭಾಜ್ಯವಾಗಿ ಸೇರಿಕೊಳ್ಳುವಂತಾಗಬೇಕೆಂದು ಹಾರೈಸಿದರು.

## ವಾಹನದ ಅವ್ಯವಸ್ಥೆಯಿಂದಾಗಿ ಸಂದರ್ಶನದಲ್ಲಿ ನ್ಯೂನತೆ

ಉಜಿರೆಯಿಂದ ಕಾವು ಮಠಕ್ಕೆ; ಅಲ್ಲಿಂದ ಮದನೇಶ್ವರ ದೇವಾಲಯಕ್ಕೆ ಹೋಗಿ ಅಂದು ರಾತ್ರಿ ಅಲ್ಲಿಯೇ ತಂಗುವುದೆಂದು ಯೋಜಿಸಲಾಗಿತ್ತು.

ಆದರೆ ವಾಹನದ ಅವ್ಯವಸ್ಥೆಯಿಂದಾಗಿ ಉಜಿರೆಯಿಂದ ಹೊರಡುವುದು ವಿಳಂಬವಾಗಿ ಕಾವು ಮಠದ ಸಂದರ್ಶನದಲ್ಲಿ ಸ್ವಲ್ಪ ನ್ಯೂನತೆ ಬಂತು. ತ್ರಿವಿಕ್ರಮ ಪಂಡಿತರ, ನಾರಾಯಣ ಪಂಡಿತರ ನಿವಾಸಸ್ಥಾನವಾಗಿದ್ದ ಕಾವುಮಠವನ್ನು ಶ್ರೀ ಗಳವರ ಜೊತೆಗೆಯೇ ಎಲ್ಲ ಯಾತ್ರಿಕರು ಸಂದರ್ಶಿಸಬೇಕೆಂದಿತ್ತು. ಅಲ್ಲದೆ, ಅಲ್ಲಿ ತ್ರಿವಿಕ್ರಮಪಂಡಿತಾದಿಗಳ ಪಾಂಡಿತ್ಯದ ಬಗ್ಗೆ, ಕೊಡುಗೆಗಳ ಬಗ್ಗೆ ಪ್ರವಚನ ನಡೆಯಬೇಕೆಂದಿತ್ತು. ಆದರೆ ವಿಳಂಬವಾಗಿ ಹೊರಟ ಪ್ರಯುಕ್ತ ಎಲ್ಲರೂ ಜೊತೆಗೇ ಕಾವುಮಠಕ್ಕೆ ಹೋಗಲಾಗಲಿಲ್ಲ. ಜೊತೆಗೇ ಹೋಗದ ಪ್ರಯುಕ್ತ ಪ್ರವಚನವನ್ನೂ ನಡೆಸಲಾಗಲಿಲ್ಲ. ಮೊದಲು ಶ್ರೀಪಾದಂಗಳವರು ಕಾವು ಮಠದ ಸಂದರ್ಶನ ಪಡೆದು, ಮಧೂರಿನಲ್ಲಿ ಮದನೇಶ್ವರ ಎನಿಸಿರುವ ರುದ್ರನ ಹಾಗೂ ಗಣಪತಿಯ ದರ್ಶನ ಪಡೆದರು. ಉಳಿದ ಯಾತ್ರಿಕರು ಆ ಮೇಲೆ ಕಾವುಮಠವನ್ನು ನೋಡಿ, ಮಧೂರಿಗೆ ಬರಬೇಕಾಯಿತು. ಉಳಿದ ಯಾತ್ರಿಕರೆಲ್ಲ ಅಂದು ಮಧೂರಿ ನಲ್ಲಿಯೇ ತಂಗಿದ್ದರೆ, ಶ್ರೀಪಾದರು ಕಾವುಮಠದಲ್ಲಿ ಉಳಿದುಕೊಂಡಿದ್ದರು.

## ಶ್ರೀ ಪೇಜಾವರ ಶ್ರೀಗಳ ಮೂಲಕ ಶ್ರೀ ವಿಷ್ಣುಮೂರ್ತಿಯ ಸಂದರ್ಶನ

12-4-96ರಂದು ಕೂಡಾ ಶ್ರೀಗಳವರ ಜೊತೆಗೇ ಶ್ರೀ ವಿಷ್ಣುಮಂಗಲದ ಶ್ರೀ ವಿಷ್ಣುಮೂರ್ತಿಯ ಸಂದರ್ಶನ ಪಡೆಯುವುದಕ್ಕಾಗಲೀ, ಅಲ್ಲಿ ಪ್ರವಚನ ನಡೆಸುವುದಕ್ಕಾಗಲೀ ಆಗಲಿಲ್ಲ. ಶ್ರೀ ಪ್ರಭಂಜನಾಚಾರ್ಯರು ಹಾಗೂ ಉಳಿದ ಯಾತ್ರಿಕರು ವಿಷ್ಣುಮಂಗಲದ ವಿಷ್ಣುಮೂರ್ತಿಯ ಸಂದರ್ಶನ ಪಡೆದು ಕಣ್ವತೀರ್ಥ ಮಠಕ್ಕೆ ತೆರಳಿದರು.

ಕಾವುಮಠದಲ್ಲಿ ತಂಗಿದ್ದ ಶ್ರೀಗಳವರ ಜೊತೆಗೆ ಅವರ ವಾಹನದಲ್ಲಿ ಹೋಗ

ಬೇಕಾಗಿದ್ದ ಕೆಲವು ಮಠದ ಪರಿಚಾರಕರಿಗೆ ಹಾಗೂ ಕೆಲವು ಯಾತ್ರಿಕರಿಗೆ ಶ್ರೀಗಳವರ ಮೂಲಕ ಆಚಾರ್ಯಕರಾರ್ಚಿತ ಲಕ್ಷ್ಮೀನಾರಾಯಣನ ವಿಗ್ರಹದ ದರ್ಶನ ಪಡೆಯುವ ಸೌಭಾಗ್ಯ ದೊರೆಯಿತು. ಅಲ್ಲದೆ ಶ್ರೀಗಳವರ ಜೊತೆಗೆಯೇ ಕಾವು ಮಠದಲ್ಲಿ ಸುಮಾರು ಒಂದು ಗಂಟೆ ಕಾಲ ಪಾರಾಯಣಾದಿಗಳನ್ನು ನಡೆಸುತ್ತ ಸತ್ಕಾಲಕ್ಷೇಪಕ್ಕೆ ಅವಕಾಶ ದೊರಕಿತು.

ವಿಷ್ಣುಮಂಗಲದ ಶ್ರೀ ವಿಷ್ಣುಮೂರ್ತಿಯನ್ನು ನೋಡಬೇಕೆಂದು ಶ್ರೀ ವಿದ್ಯಾಮಾನ್ಯತೀರ್ಥರಿಗೆ ಪ್ರಬಲವಾದ ಇಚ್ಛೆ ಇತ್ತು. ವಾಹನ ಸಂಚಾರಕ್ಕೆ ಸೌಕರ್ಯವಿಲ್ಲದ ದಾರಿಯಲ್ಲಿ ಸುಮಾರು ಒಂದು ಮೈಲು ದೂರ ನಡೆಯಬೇಕಿತ್ತು. ಆದರೂ ಹೇಗಾದರೂ ಮಾಡಿ ಹೋಗಬೇಕೆಂದು ಹೊರಟದ್ದಾಯಿತು. 'ಚೌಕಿ' ಎನ್ನುವಲ್ಲಿಗೆ ಹೋಗುವಷ್ಟರಲ್ಲಿ ವಾಹನದಲ್ಲಿದ್ದ ಯಾರಿಗೂ ವಿಷ್ಣುಮಂಗಲ ದೇವಸ್ಥಾನಕ್ಕೆ ಹೋಗಲು ಸರಿಯಾದ ಮಾರ್ಗ ಗೊತ್ತಿಲ್ಲ ಎಂದು ತಿಳಿಯಿತು. ಹಾಗಾದರೆ ಕಾವುಗೋಳಿ ಶ್ರೀ ವಿಷ್ಣುಮೂರ್ತಿ ದೇವಾಲಯದಲ್ಲಿಯ ಅರ್ಚಕರನ್ನು ಜೊತೆಗೆ ಕರೆದೊಯ್ಯುವುದೆಂದು ಹಿಂತಿರುಗಿ ಆ ದೇವಾಲಯಕ್ಕೆ ಬರಲಾಯಿತು. ಅದೇ ಕ್ಷಣಕ್ಕೆ ಶ್ರೀ ಪೇಜಾವರ ಶ್ರೀಗಳವರೂ ಅಲ್ಲಿಗೆ ಬಂದರು. ಪುಂಡರೀಕಪುರಿ. ಪದ್ಮತೀರ್ಥ ಮುಂತಾದವರ ಜೊತೆ ಶ್ರೀಮದಾಚಾರ್ಯರು ವಾಕ್ಯಾರ್ಥ ನಡೆಸಿ. ಸೋಲಿಸಿದ 'ಕೂಡ್ಲು' ಎನಿಸುವ ಕಟ್ಟೆಯ ಎದುರು ಇರುವ ಶ್ರೀ ವಿಷ್ಣುಮೂರ್ತಿಯ ದರ್ಶನ ಪಡೆದು. ವಿಷ್ಣುಮಂಗಲದ ಶ್ರೀ ವಿಷ್ಣುಮೂರ್ತಿಯ ಸಂದರ್ಶನಕ್ಕಾಗಿ ಹೊರಡಲಾಯಿತು. ಹೆಚ್ಚು ಕಾಲ್ನಡಿಗೆಯ ಸಂಚಾರದ ಆವಶ್ಯಕತೆ ಇಲ್ಲದ, ಹತ್ತಿರದ ಒಳದಾರಿಯಲ್ಲಿ ಶ್ರೀ ವಿಶ್ವೇಶತೀರ್ಥರು ವಿಷ್ಣುಮಂಗಲಕ್ಕೆ ಕರೆದೊಯ್ದರು. ಶ್ರೀ ವಿದ್ಯಾಮಾನ್ಯತೀರ್ಥರಿಗೆ ಹೆಚ್ಚು ಆಯಾಸವಿಲ್ಲದೆ ವಿಷ್ಣುಮಂಗಲಕ್ಕೆ ಹೋಗುವುದು ಸಾಧ್ಯವಾಯಿತು. ದೇವಸ್ಥಾನದ ಹೊರಗಿರುವ ಚಕ್ರತೀರ್ಥದ ಕುಂಡಿಗೆಯಲ್ಲಷ್ಟೇ ಇರುವ ನೀರನ್ನು ಪ್ರೋಕ್ಷಿಸಿಕೊಂಡು, ಶ್ರೀ ವಿಷ್ಣುಮೂರ್ತಿಯ ದರ್ಶನ ಪಡೆದದ್ದಾಯಿತು. ಶ್ರೀಮದಾಚಾರ್ಯರಿಗೂ ತ್ರಿವಿಕ್ರಮ ಪಂಡಿತರಿಗೂ ಹದಿನೈದು ದಿನಗಳ ಕಾಲ ವಾಕ್ಯಾರ್ಥ ನಡೆದು, ತ್ರಿವಿಕ್ರಮ ಪಂಡಿತರು ಆಚಾರ್ಯರ ಶಿಷ್ಯತ್ವವನ್ನು ಸ್ವೀಕರಿಸುವಂತೆ ಪ್ರೇರಣೆ ನೀಡಿದ ಪವಿತ್ರ ತಾಣ ಇದೆಂದು ಅನುಸಂಧಾನವನ್ನು ತಂದುಕೊಳ್ಳಲಾಯಿತು. ಪ್ರಭಂಜನಾಚಾರ್ಯರು ಹಾಗೂ ಹೆಚ್ಚಿನ ಯಾತ್ರಿಕರು ಜೊತೆಗೆ ಇಲ್ಲದುದರಿಂದ ಅಲ್ಲಿ ಪ್ರವಚನ ನಡೆದಿಲ್ಲ. ಅಂತೂ ವಿಷ್ಣುಮಂಗಲದ ಶ್ರೀ ವಿಷ್ಣುಮೂರ್ತಿ ಆಕಸ್ಮಿಕವಾಗಿ ಶ್ರೀ ಪೇಜಾವರ ಶ್ರೀಗಳವರ ಸಮಾಗಮವನ್ನು ವ್ಯವಸ್ಥೆಗೊಳಿಸಿ ಅವರ ಮೂಲಕ ಶ್ರೀ ವಿದ್ಯಾಮಾನ್ಯತೀರ್ಥರಿಗೆ ಅನಾಯಾಸವಾಗಿ ತನ್ನ ಸಂದರ್ಶನದ ಸೌಭಾಗ್ಯವನ್ನು ಅನುಗ್ರಹಿಸಿಕೊಟ್ಟ ಘಟನೆ ತುಂಬ ಸ್ವಾರಸ್ಯಕರವೆನಿಸುವಂತಹದ್ದು;

## ಕಣ್ವತೀರ್ಥ ಮಠದಲ್ಲಿ ಭಾವುಕತನದ ಉಪಸಂಹಾರ

ವಿಷ್ಣುಮಂಗಲದಿಂದ ಕಣ್ವತೀರ್ಥಕ್ಕೆ ಹೋಗಲಾಯಿತು. ಉಳಿದ ಯಾತ್ರಿಕರೂ ಆಗಾಗಲೇ ಕಣ್ವತೀರ್ಥವನ್ನು ತಲುಪಿದ್ದರು.

ಕಣ್ವತೀರ್ಥ ಮಠದ ಆವರಣವನ್ನು ಪ್ರವೇಶಿಸುತ್ತಲೇ ಅಷ್ಟ ಮಠಗಳಲ್ಲಿ ದ್ವಂದ್ವ ಮಠದ ವ್ಯವಸ್ಥೆಯನ್ನು ಯಾವ ಕಟ್ಟೆಯಲ್ಲಿ ನಡೆಸಲಾಗಿತ್ತೋ ಆ ಕಟ್ಟೆ ಶ್ರೀಮದಾಚಾರ್ಯರ ಮಠವ್ಯವಸ್ಥಾಪಕತ್ವದ ವ್ಯಕ್ತಿತ್ವವನ್ನು ಸಾರುತ್ತ ಸ್ವಾಗತಿಸುತ್ತಿತ್ತು.

ಕಣ್ವಮಠದ ಎದುರಿಗಿರುವ ಸರೋವರ ಚಾತುರ್ಮಾಸ್ಯ ಕಾಲದಲ್ಲಿ ಆಚಾರ್ಯರು ನಡೆಸಿದ್ದ ಅವಗಾಹನ ಸ್ನಾನದಿಂದ ಪವಿತ್ರವಾದ ನೀರನ್ನೊಳಗೊಂಡದ್ದು, ಅಂತಹ ಅನುಸಂಧಾನದಿಂದ ಅಲ್ಲಿ ಸ್ನಾನ ಮಾಡಿ, ಸಮುದ್ರ ಸ್ನಾನವನ್ನು ಕೆಲವು ಯಾತ್ರಿಕರು ನಡೆಸಿದರು. ಅಲ್ಲಿಯ ಸಮುದ್ರದ ದಡದಲ್ಲಿಯೇ ಒಂದು ಗ್ರಹಣ ಕಾಲದಲ್ಲಿ ಶ್ರೀಮದಾಚಾರ್ಯರು ಐತರೇಯೋಪನಿಷತ್ತಿನ ಪ್ರವಚನ ನಡೆಸಿದ್ದು, ತಮ್ಮ ಕಡೆಗಣ್ಣ ನೋಟದಿಂದ ಸಮುದ್ರದ ಅರ್ಭಟವನ್ನು ಕಡಿಮೆ ಮಾಡಿದ್ದು—ಇವನ್ನೆಲ್ಲ ನೆನಪಿಸಿಕೊಳ್ಳಲಾಯಿತು.

ಮಧ್ಯಾಹ್ನ ಭೋಜನದ ಬಳಿಕ ಮಠದ ಹೊರಜಗಲಿಯಲ್ಲಿ ಶ್ರೀ ವಿಜಯಧ್ವಜ ತೀರ್ಥರ ವೃಂದಾವನದೆದುರು ಶ್ರೀ ಪೇಜಾವರ ಶ್ರೀಗಳವರ ಅಧ್ಯಕ್ಷತೆಯಲ್ಲಿ ಈ 'ಯಾತ್ರಾ ಸಪ್ತಾಹ'ದ ಸಮಾರೋಪ ಸಮಾರಂಭ ಜರಗಿತು.

ಮಧೂರು, ವಿಷ್ಣುಮಂಗಲ ಹಾಗೂ ಕಣ್ವತೀರ್ಥ ಈ ಪ್ರದೇಶಗಳಿಗೆ ಆಚಾರ್ಯರ ಸಂಪರ್ಕದ ಕುರಿತ ಹಾಗೂ ಇಲ್ಲಿ ಅವರು ತೋರಿದ ಮಹಿಮೆಗಳ ಕುರಿತು ಶ್ರೀ ವಿಶ್ವೇಶತೀರ್ಥರು ವಿವರಿಸಿದರು. ಅಲ್ಲದೆ ಶ್ರೀ ಮಧ್ವರ ಸಂಪರ್ಕಕ್ಕೊಳಗಾದ ಸ್ಥಳಗಳಲ್ಲಿ ಸ್ಮಾರಕಗಳ ನಿರ್ಮಾಣದ ವಿಷಯದಲ್ಲಿ ಪವಿತ್ರ ಸಂಕಲ್ಪ ಮಾಡಬೇಕೆಂದು ಕರೆನೀಡಿದರು.

ಅಗಾಧವಾದ ಸಮುದ್ರದಲ್ಲಿ ಯಥಾಶಕ್ತಿ ಸ್ನಾನಮಾಡುವಂತೆ, ಇತಿಮಿತಿಗೆ ನಿಲುಕದಂತಿರುವ 'ಯಮಕಭಾರತ'ದ ಕೆಲವು ಪದ್ಯಗಳನ್ನಷ್ಟೇ ಕಂಡದ್ದಾಯಿತು ಎಂದು ಶ್ರೀ ವಿದ್ಯಾಧೀಶತೀರ್ಥರು ತಿಳಿಸಿದರು.

ಈ ಯಾತ್ರೆಯನ್ನು 'ಪಾವನಯಾತ್ರೆ'—ಎಂದು ಕರೆದ ಶ್ರೀ ಪ್ರಭಂಜನಾಚಾರ್ಯರು, ಈ ಯಾತ್ರೆಯಿಂದಾಗಿ 750 ವರ್ಷಗಳಷ್ಟು ಹಿಂದೆ ಸರಿದು ಆಚಾರ್ಯರ ಚರಿತ್ರೆಯನ್ನು ಪರಿಶೀಲಿಸಿದಂತಾಗಿದೆ ಎಂದು ಅಭಿಪ್ರಾಯಪಟ್ಟರು. ಸಂಪಾದನೆಯ ಹಣವನ್ನು ಬ್ಯಾಂಕಲ್ಲಿಟ್ಟು ಕಳ್ಳಕಾಕರ ಭಯಕ್ಕೊಳಗಾಗದೆ ನಿಶ್ಚಿಂತ

ರಾಗಿರುವಂತೆ ಯಾತ್ರೆಯ ಪುಣ್ಯವನ್ನು ಶ್ರೀಪಾದರ ಅಂತರ್ಯಾಮಿ ಶ್ರೀಕೃಷ್ಣನಲ್ಲಿ ಸಮರ್ಪಿಸಬೇಕೆಂದು ಶ್ರೀ ಪ್ರಭಂಜನಾಚಾರ್ಯರು ಕರೆ ನೀಡಿದರು.

ಶ್ರೀ ವಿದ್ಯಾಮಾನ್ಯತೀರ್ಥರು ಶ್ರೀಮದಾಚಾರ್ಯರ ಕಾಲದಲ್ಲಿಯೇ ರಚಿತವಾದ ಅವರ ಚರಿತ್ರೆಯ ಬಗ್ಗೆ ಅಧಿಕ ದಾರ್ಢ್ಯವನ್ನು ತಂದುಕೊಳ್ಳುವಲ್ಲಿ ಈ ಯಾತ್ರೆ ಉಪಯುಕ್ತವಾಗಿದೆ— ಎಂದು ತಿಳಿಸಿದರು.

"ಯುವಕ ಭಾರತ"ದ ಕೊನೆಯ ಪದ್ಯವನ್ನು ಎಲ್ಲರಿಂದ ಹೇಳಿಸುವುದರ ಮೂಲಕ ಸಾಮೂಹಿಕವಾಗಿ ಉಪದೇಶಿಸಲಾಯಿತು.

ಯಾತ್ರಾಕಾಲದಲ್ಲಿ ಪ್ರವಚನ ನಡೆದ ಸುಮಧ್ವವಿಜಯ ಹಾಗೂ 'ಯುವಕ ಭಾರತ' ಗ್ರಂಥಗಳ ಪ್ರತೀಕದಲ್ಲಿ ಶ್ರೀ ವೇದವ್ಯಾಸರನ್ನು ಶ್ರೀಪಾದರು ಪೂಜಿಸಿದರು.

ಪಾವನ ಯಾತ್ರೆಯಲ್ಲಿ ವಿಶೇಷವಾಗಿ ಪ್ರವಚನವನ್ನು ನಡೆಸಿಕೊಟ್ಟು, ಯಾತ್ರೆಗೆ ಕಳೆತುಂಬಿದ ಶ್ರೀ ಪ್ರಭಂಜನಾಚಾರ್ಯರಿಗೆ ಶ್ರೀ ವಿದ್ಯಾಮಾನ್ಯತೀರ್ಥರು ತಮ್ಮ 'ಶೇಷವಸ್ತ್ರ'ವನ್ನು ಹೊದಿಸಿ ಹೃತ್ಪೂರ್ವಕವಾಗಿ ಸನ್ಮಾನಿಸಿದರು. ಶ್ರೀ ಪ್ರಭಂಜನಾಚಾರ್ಯರು ತಮ್ಮ ಶಿಷ್ಯರಿಂದ ಕೂಡಿಕೊಂಡು ಶ್ರೀಪಾದಂಗಳವರಿಗೆ 'ಪಾದಪೂಜೆ'ಯನ್ನು ಸಲ್ಲಿಸಿದರು.

ಅಷ್ಟ ಮಠಗಳಲ್ಲಿ ದ್ವಂದ್ವ ಮಠದ ವ್ಯವಸ್ಥೆಯನ್ನು ನಡೆಸಲಾದ ಐತಿಹಾಸಿಕ ಕಟ್ಟೆಯ ಪಾರ್ಶ್ವದಲ್ಲಿ ಯಾತ್ರೆಯಲ್ಲಿ ಪಾಲ್ಗೊಂಡ ಎಲ್ಲ ಯಾತ್ರಿಕರ ಸಾಮೂಹಿಕ ಫೋಟೋ ತೆಗೆಯುವುದರೊಂದಿಗೆ ಯಾತ್ರೆಯ ಸಮಾರೋಪ ಸಮಾರಂಭ ಕೊನೆಗೊಂಡಿತು.

x x x x

# ಸಂದೇಶ ಶತಕ

ಪಾವನಯಾತ್ರೆಯಲ್ಲಿ ಆಚಾರ್ಯರ ಸಂಪರ್ಕಕ್ಕೊಳಗಾದ ಸ್ಥಳಗಳ ಸಂದರ್ಶನದೊಂದಿಗೆ, ಆಯಾ ಸ್ಥಳಗಳಲ್ಲಿ ಪ್ರವಚನಗಳ ಮೂಲಕ ಆಚಾರ್ಯರ ಆಕೃತಿಯ ಹಾಗೂ ಕೃತಿಯ ಮಾಹಿತಿಗಳ, ಜಾಗೃತಿಯ ಸಂಪಾದನೆಯನ್ನೂ ಗುರಿಯಾಗಿ ಇಟ್ಟುಕೊಳ್ಳಲಾಗಿತ್ತು. ಆ ಉದ್ದೇಶದ ಪೂರಣೆಗಾಗಿ ಶ್ರೀಗಳವರು ಹಾಗೂ ಡಾ। ಪ್ರಭಂಜನಾಚಾರ್ಯರು ಅಲ್ಲಲ್ಲಿ ನೀಡಿರುವ ಪ್ರವಚನಗಳಿಂದ ೧೦೦ ಸಂದೇಶಗಳನ್ನು ಆಯ್ಕೆ ಮಾಡಿ, ಅವುಗಳನ್ನು 'ಸಿದ್ಧಾಂತ', 'ಮಹಿಮೆ', 'ಸಾಧನೆ', 'ಆಶಯ' ಹಾಗೂ 'ಕೃತಿ'—ಎಂಬುದಾಗಿ ಐದು ಪ್ರಮೇಯಗಳಿಗೆ ಸಂಬಂಧಿಸಿದಂತೆ ಪೋಣಿಸಿ ಇಲ್ಲಿ ಪ್ರಸ್ತುತಪಡಿಸಲಾಗಿದೆ—

## ಸಿದ್ಧಾಂತ :

### ಹರಿಃ ಪರತರಃ

ಭಗವದ್ಗೀತೆಯಲ್ಲಿ (7–7) 'ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ'—ಎಂಬುದಾಗಿ ನಿತ್ಯನಿರ್ದುಃಖ ಸ್ವರೂಪದ ಲಕ್ಷ್ಮೀದೇವಿ 'ಪರಾ' ಎನಿಸಿದ್ದು, ಅವಳಿಗಿಂತ ಉತ್ತಮನಾಗಿರುವ ಶ್ರೀಹರಿ ಮತ್ತು ಲಕ್ಷ್ಮೀದೇವಿಯ ಮಧ್ಯೇ 'ಪರತರ' ಎನಿಸುವವರು ಇನ್ನಾರೂ ಇಲ್ಲದಿರುವುದರಿಂದ ಶ್ರೀಹರಿ ಪರತಮನಾಗಿರುವಂತೆ, ಪರತರನೂ ಆಗಿರುವನು (ಅಭಾವಾದಂತರಾನ್ಯಸ್ಯ ತ್ವಿಹೈಕಾರ್ಥೌ ತರಪ್ತಮೌ—ಗೀ. ತಾ.) ಎಂದು ಸಂದೇಶಿಸಿರುವಂತೆ, 'ಶ್ರೀ ಮನ್ಮಧ್ವಮತೇ ಹರಿಃ ಪರತರಃ'—ಎಂಬಲ್ಲಿಯೂ 'ಪರತಮಃ' ಎನ್ನದೆ 'ಪರತರಃ'—ಎಂದು ಪ್ರಯೋಗಿಸುವುದರ ಮೂಲಕ ಮಧ್ವಮತದ ಪ್ರಕಾರ ಶ್ರೀಹರಿಯು ಪರತಮನಾಗಿರುವುದಷ್ಟೇ ಅಲ್ಲದೆ, 'ಪರಾ' ಎನಿಸುವ ಲಕ್ಷ್ಮೀದೇವಿ ಮತ್ತೆ 'ಪರತಮ' ಎನಿಸುವ ಶ್ರೀಹರಿಯ ಮಧ್ಯೇ ಪರತರ ಎನಿಸುವವರು ಇನ್ನಾರೂ ಇಲ್ಲದಿರುವುದರಿಂದ ಅವನೇ ಪರತರನೂ ಆಗಿರುವನೆಂದು ಸೂಚಿಸಲಾಗಿದೆ.

—ಶ್ರೀ ವಿದ್ಯಾಮಾನ್ಯತೀರ್ಥರು

x x x x

## ಸ್ಮರಣೆಯ ಬೇರೆ ಬೇರೆ ಹಂತ

'ಖಂಡಸ್ಮೃತಿರ್ಧಾರಣಾ ಸ್ಯಾತ್'—ಆಗಾಗ್ಗೆ ವಿಚ್ಛೇದಕ್ಕೊಳಗಾಗುವ ಸ್ಮರಣೆ ಧಾರಣೆ ಎನಿಸಿದರೆ, 'ಅಖಂಡಾ ಧ್ಯಾನಮುಚ್ಯತೇ'—ಅವಿಚ್ಛಿನ್ನವಾಗಿ ನಡೆಸುವ ಸ್ಮರಣೆ ಧ್ಯಾನ ಎನಿಸುವುದು. 'ಅಪ್ರಯತ್ನಾತ್ ಸಮಾಧಿಶ್ಚ......' ಧ್ಯಾನವನ್ನು ವಿಶೇಷವಾಗಿ ನಡೆಸುತ್ತ ಅನಾಯಾಸವಾಗಿ ಭಗವಂತನನ್ನು ಧ್ಯಾನಿಸುವ ಹಂತಕ್ಕೆ ತಲುಪಿತೆಂದರೆ ಅದು 'ಸಮಾಧಿ' ಎನಿಸುವುದು.

ಹೀಗೆ ಭಗವಂತನ ಸ್ಮರಣೆಯ ಹಂತ ಹಂತವನ್ನು ಗುರುತಿಸಿ ತೋರಿಸಿದ ಆಚಾರ್ಯರು 'ಯತತೋऽಪಿ ಹರೇಃ ಪದಸಂಸ್ಮರಣೇ ಸಕಲಂ ಹ್ಯಘಮಾಶು ಲಯಂ ವ್ರಜತಿ' —ಎಂಬುದಾಗಿ ಭಗವಂತನ ಸ್ಮರಣೆ ಮಾಡಲಾಗದೆ, ಸ್ಮರಣೆಗಾಗಿ ಯತ್ನಿಸಿದರೂ ಅಷ್ಟರಿಂದಲೇ ಸಕಲ ಪಾಪಗಳ ಪರಿಹಾರ ರೂಪವಾದ ಫಲ ದೊರಕುವುದೆಂದು ಸಾರುವುದರ ಮೂಲಕ ಸಾಧಕರಿಗೆ ಸಾಧನೆಯ ವಿಷಯದಲ್ಲಿ 'ಆತ್ಮವಿಶ್ವಾಸ' ಮೂಡುವಂತೆ ಮಾಡಿ ಆ ವಿಷಯದಲ್ಲಿ ಔದಾರ್ಯವನ್ನು ವ್ಯಕ್ತಪಡಿಸಿದ್ದಾರೆ.

—ಶ್ರೀ ವಿಶ್ವೇಶತೀರ್ಥರು

x x x x

## ವಿಷದ ಮಿಶ್ರಣದಿಂದ ಅಪೇಯ

ತತ್ವಜ್ಞಾನ ಪರಿಶುದ್ಧವಾಗಿರಬೇಕು. ಅದಕ್ಕೆ ವಿಪರೀತ ಜ್ಞಾನದ ಸ್ವಲ್ಪವೂ ಸೋಂಕು ಆಗದಂತೆ ಎಚ್ಚರವಹಿಸಬೇಕು. ಹಾಲಿಗೆ ಸ್ವಲ್ಪ ವಿಷದ ಮಿಶ್ರಣವಾದರೂ ಅದು ಅಪೇಯವೆನಿಸುವುದು ತಾನೇ ?

—ಶ್ರೀ ವಿದ್ಯಾಧೀಶತೀರ್ಥರು

x x x x

## ತಪ್ಪಾದ ಗುರುಗಳ ಆಯ್ಕೆಯ ಅನರ್ಥ

ತಪ್ಪಾದ ದೇವನನ್ನು ಆಯ್ಕೆ ಮಾಡಿಕೊಂಡರೆ ಯೋಗ್ಯ ಗುರು ದೊರಕಿದಲ್ಲಿ ಅವರ ಮೂಲಕ ಸರಿಪಡಿಸಿಕೊಳ್ಳಬಹುದು. ಆದರೆ ತಪ್ಪಾದ ಗುರುಗಳನ್ನೇ ಆಯ್ಕೆ ಮಾಡಿಕೊಂಡರೆ ಅಂತಹ ಶಿಷ್ಯನಿಗೆ ಅಂಧಂತಮಸ್ಸೇ ಗತಿ !

—ಶ್ರೀ ಪ್ರಭಂಜನಾಚಾರ್ಯರು

x x x x

## 'ಅನ್ಯೋऽಸೌ ಅನ್ಯೋऽಹಮಸ್ಮಿ....'—ಅಂತರ್ಯ

ಬೃಹದಾರಣ್ಯಕೋಪನಿಷತ್ತಿನಲ್ಲಿ (3–5–4) 'ಯೋ ಅನ್ಯಾಂ ದೇವತಾಮುಪಾಸ್ತೇ....' —ಎಂಬುದಾಗಿ ಮೊದಲೇ 'ವಾಸ್ತವವಾಗಿ ಜೀವಾತ್ಮನಿಗಿಂತ ಬೇರೆಯೇ ಆಗಿರುವ ದೇವನನ್ನು'—ಎಂದು ಅನುವಾದಿಸಿ, 'ಅನ್ಯೋऽಸಾವನ್ಯೋऽಹಮಸ್ಮೀತಿ ನ ಸ ವೇದ ಯಥಾ ಪಶುಃ' ಆ ದೇವ ಬೇರೆಯೇ ಅಹಂಶಬ್ದವಾಚ್ಯನಾದ ಜೀವನು ಬೇರೆಯೇ ಅಂದರೆ ಅವನನ್ನು ಆಶ್ರಯಿಸಿಕೊಂಡಿರದೆ ಸ್ವತಂತ್ರನಾಗಿರುವವನು— ಎಂದು ಯಾರು ತಿಳಿದಿರ್ರು ವನೋ ಅಂತಹವನು ಪಶುವಿನಂತೆ ಅವಿವೇಕಿ ಎಂದು ನಿಂದಿಸಿರುವುದೇ ಹೊರತು ಪರಮಾತ್ಮನಿಗಿಂತ ಜೀವಾತ್ಮನು ಸ್ವರೂಪತಃ ಬೇರೆಯಾಗಿ ದ್ದಾನೆಂದು ತಿಳಿಯುವವನನ್ನು ನಿಂದಿಸುವುದಲ್ಲ. ಯಾಕೆಂದರೆ, ಹಾಗಿದ್ದರೆ ಪ್ರಾರಂಭದಲ್ಲಿ 'ಅನನ್ಯಾಂ ದೇವತಾಮುಪಾಸ್ತೇ....' ಸ್ವರೂಪತಃ ಜೀವಾತ್ಮನಿಗಿಂತ ಅಭಿನ್ನನಾದ ದೇವತೆಯನ್ನು ಎಂದೇ ಅನುವಾದಿಸಬೇಕಿತ್ತು ತಾನೇ ?

ಅಣ್ಣ ತಮ್ಮಂದಿರು ಜಗಳಾಡಿ ತಮ್ಮ ತಮ್ಮ ಮಟ್ಟಿಗೆ ತಾವಿದ್ದರೆ ಅವರಿಬ್ಬರೂ ಬೇರೆ ಬೇರೆಯಾಗಿಯೇ ಇರುವರೆಂದು ವ್ಯವಹರಿಸುವಂತೆ ಪರಮಾತ್ಮ ಜೀವಾತ್ಮರು ಹಾಗೆ ಬೇರೆ ಬೇರೆಯಾಗಿ ಇರುವವರಲ್ಲ ಎಂದು ಸಂದೇಶಿಸಲು ಉಪನಿಷತ್ತು ಹೊರಟಿದೆಯಷ್ಟೇ.

—ಶ್ರೀ ವಿದ್ಯಾಮಾನ್ಯತೀರ್ಥರು

x x x x

## ಮೋಕ್ಷ ಪುರುಷಾರ್ಥವೆನಿಸುವಂತೆ ಸಮರ್ಥನೆ

ಬಸವ ಬಂದರೆ ಬಸವನ ಬಾಲ ಹಿಂದೆಯೇ ಬರುವಂತೆ ಮೋಕ್ಷದಲ್ಲಿ ಸುಖ ಇದೆ ಎಂದರೆ ದುಃಖವನ್ನೂ ಒಪ್ಪಬೇಕಾಗುವುದು. ಆದ್ದರಿಂದ ಮೋಕ್ಷ ದಲ್ಲಿ ಸುಖವೂ ಇಲ್ಲ—ಎಂದು ಕೆಲವರು ವಾದಿಸುವುದುಂಟು. ಹಾಗಾದರೆ ಜ್ಞಾನದ ಜೊತೆಗೆ ಭ್ರಾಂತಿಯೂ ಇರುವಂತೆ ಮೋಕ್ಷದಲ್ಲಿ ಜ್ಞಾನವನ್ನು ಒಪ್ಪಿದರೆ ಭ್ರಾಂತಿಯನ್ನೂ ಒಪ್ಪಬೇಕಾದೀತೆಂದು ಜ್ಞಾನವೂ ಇಲ್ಲ ಎನ್ನ ಬೇಕಾದೀತು ! ಹೀಗೆ ಸುಖ, ಜ್ಞಾನವಿಲ್ಲದ ಮೋಕ್ಷ ಶೂನ್ಯದಂತೆ ಪುರುಷಾರ್ಥ ವೆನಿಸುವುದಾದರೂ ಹೇಗೆ ?

ಆದಕ್ಕಾಗಿ ಶ್ರೀಮದಾಚಾರ್ಯರು ಮೋಕ್ಷದಲ್ಲಿ ದುಃಖದ ಸ್ಪರ್ಶವಿರದ ಅಪ್ರಾಕೃತವಾದ ಸುಖ; ಭ್ರಾಂತಿಯ ಲೇಪವಿಲ್ಲದ ಅಪ್ರಾಕೃತ ಜ್ಞಾನ ಇದೆ—

ಎಂದು ಪ್ರತಿಪಾದಿಸಿ ಮೋಕ್ಷ ಪುರುಷಾರ್ಥ ಎನಿಸುವಂತೆ ಸಮರ್ಥಿಸಿರುವರು.

—ಶ್ರೀ ವಿಶ್ವೇಶತೀರ್ಥರು

x x x x

## ರಾಜೋಪಚಾರವಾಗಿ ಗಾಳಿ ಬೀಸುವುದು

ಆನಂದರೂಪಿಯಾದ ಪರಮಾತ್ಮನಿಗೆ ಸೆಖೆಯು, ಶ್ರಮದ ಪ್ರಸಕ್ತಿಯೇ ಇಲ್ಲ. ಆದರೂ ಲಕ್ಷ್ಮೀದೇವಿ ಶ್ರೀ ಮತ್ತು ಧರಾ ರೂಪಗಳಿಂದ ಅವನಿಗೆ ಚಾಮರ ದಿಂದ ಗಾಳಿಯನ್ನು ಬೀಸುತ್ತ ಇರುವಳು. ರಾಜಾಧಿರಾಜನಾದ ಅವನಿಗೆ ಅದೊಂದು ವೈಭವದ ದ್ಯೋತಕವಾದ ರಾಜೋಪಚಾರವಷ್ಟೇ.

—ಶ್ರೀ ವಿದ್ಯಾಧೀಶತೀರ್ಥರು

x x x x

## ಶೂನ್ಯದಂತಿರುವ ಬ್ರಹ್ಮನ ಐಕ್ಯ !

ಅದ್ವೈತ ಮತದಲ್ಲಿ ಜೀವಾತ್ಮರಿಗೆಲ್ಲ ಬ್ರಹ್ಮಸ್ವರೂಪತ್ವವನ್ನು ಹೇಳಲಾಗು ವುದು. ಆದ್ದರಿಂದ ಆ ಮತದ ಪ್ರಕಾರ ಜೀವಾತ್ಮನಿಗೆ ಬ್ರಹ್ಮ ಆಗಲು ಅವಕಾಶವಿದೆ. ಆದಕ್ಕಾಗಿಯೇ ನಮಗೆ ಆ ಮತದಲ್ಲಿ ಒಲವು ಎಂದು ಕೆಲವರು ಹೇಳುವುದುಂಟು

ಆದರೆ ಅದ್ವೈತ ಮತದ ಪ್ರಕಾರ ಜೀವಾತ್ಮರಿಗೆ ಐಕ್ಯ ಇದೆ ಎಂದು ಹೇಳ ಲಾಗುವ ಬ್ರಹ್ಮ ನಿರ್ಗುಣ. ನಿರಾಕಾರ. ಶೂನ್ಯದಂತಿರುವ ಅಂತಹ ಬ್ರಹ್ಮ ಎನಿಸಿ ಏನು ಸಾಧಿಸಿದಂತಾದೀತು !

—ಶ್ರೀ ವಿದ್ಯಾಮಾನ್ಯತೀರ್ಥರು

x x x x

## ಅದ್ವೈತ ಮತದಲ್ಲಿ ಆವರಣ ಕೂಡದು

ಅದ್ವೈತ ಮತದ ಪ್ರಕಾರ ಜೀವಾತ್ಮನು ಅನಾದಿ ಕಾಲದಿಂದಲೂ ಬ್ರಹ್ಮಸ್ವರೂಪನೇ ಅಂದ ಮೇಲೆ ಸಂಸಾರಾವಸ್ಥೆಯಲ್ಲಿ ಜೀವಾತ್ಮನಿಗೆ ನಾನೇ ಬ್ರಹ್ಮ ಎಂಬ ಅನುಭವ ಯಾಕೆ ಬರುವುದಿಲ್ಲ? ಎಂಬ ಪ್ರಶ್ನೆ ಏಳುವುದು. ಅವಿದ್ಯೆಯ ಆವರಣದಿಂದಾಗಿ ಆ ಅನುಭವ ಬರುವುದಿಲ್ಲ—ಎಂದು ಸಮಾಧಾನಿಸಲಾಗುವುದು. ಆದರೆ ಜೀವಾತ್ಮನಿಗೆ 'ಅಹಂ'— ಎಂದು ತನ್ನ ಸ್ವರೂಪದ ಅನುಭವ ಬರುತ್ತಿರಲು ಅವಿದ್ಯೆ ಆವರಣ ಎಂದೆನಿಸಿರುವು

ದಾದರೂ ಹೇಗೆ ?

ನಮ್ಮ ಮತದ ಪ್ರಕಾರವೂ ಸುಖಸ್ವರೂಪಿಯಾದ ಜೀವಾತ್ಮನಿಗೆ 'ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ —ಎಂದಿರುವಂತೆ ಪರಮಾತ್ಮನ ಪ್ರಾಪ್ತಿಯ ಅನಂತರವೇ ಸ್ವಾಭಾವಿಕ ಸುಖದ ಅನುಭವ. ಅದುವರೆಗೆ ಸ್ವರೂಪ ಸುಖಕ್ಕೆ ಅವಿದ್ಯೆಯ ಆವರಣ ನಮ್ಮ ಮತದ ಪ್ರಕಾರ ಹೊಂದುವುದು. ಜೀವನ ಸ್ವರೂಪವೂ ಸ್ವರೂಪಾತ್ಮಕ ಸುಖವೂ ಅತ್ಯಂತಾಭಿನ್ನಗಳಾಗಿದ್ದರೂ, ಅವುಗಳ ನಡುವೆ ಭೇದ ಪ್ರತಿನಿಧಿಯಾದ ವಿಶೇಷವನ್ನು ಒಪ್ಪಲಾಗುವ ಪ್ರಯುಕ್ತ ಸಂಸಾರಾವಸ್ಥೆಯಲ್ಲಿ 'ಅಹಂ' ಎಂದು ಜೀವನ ಸ್ವರೂಪದ ಅನುಭವವಿದ್ದರೂ ಸ್ವರೂಪಾತ್ಮಕ ಸುಖಕ್ಕೆ ಅವಿದ್ಯೆಯ ಆವರಣ ಇರುವುದರಿಂದ ಅದರ ಅನುಭವ ಇಲ್ಲ ಎಂದೆನ್ನಬಹುದಾಗಿದೆ.

—ಶ್ರೀ ವಿದ್ಯಾಮಾನ್ಯತೀರ್ಥರು

x x x x

## ಪರಮಾತ್ಮನ ಮಹಿಮೆಗೆ ಪೋಷಕವಾಗುವಂತೆ ಜಗತ್ಸತ್ಯತ್ವದ ಸಮರ್ಥನೆ

ತಾರ್ಕಿಕರೂ ಜಗತ್ತನ್ನು ಸತ್ಯ ಎನ್ನುವರು. ಆದರೆ ಅಸತ್ಕಾರ್ಯ-ವಾದವನ್ನು ಒಪ್ಪುವ ಅವರ ಪ್ರಕಾರ ಕಾರಣ ರೂಪದಲ್ಲೂ ಅಸತ್ತಾದ ಅಂದರೆ ಇರದ ಜಗತ್ತು ಸತ್ಯವಾಗಿ ಹುಟ್ಟುವುದಾದರೂ ಹೇಗೆ? ಮಡಿಕೆ ಹುಟ್ಟುವ ಮುಂಚೆ ಮಣ್ಣಿನ ರೂಪದಲ್ಲಾದರೂ ಇದೆ ಎಂದು ಒಪ್ಪದಿದ್ದಲ್ಲಿ ಮಣ್ಣಿನಿಂದಲೇ ಮಡಿಕೆ ಹುಟ್ಟುವುದೆಂಬ ನಿಯಮವನ್ನಾದರೂ ಹೇಗ ಕೂಡಿಸುವುದು ? ಆದ್ದರಿಂದ ಅವರ ಅಸತ್ಕಾರ್ಯವಾದದ ಪ್ರಕಾರ ಸತ್ಯ ಜಗತ್ತಿನ ಸೃಷ್ಟಿಯನ್ನು ಹೇಳಲು ಬರುವುದಿಲ್ಲ.

ರಾಮಾನುಜೀಯರಾದರೂ ಜಗತ್ತನ್ನು ಸತ್ಯ ಎಂದು ಒಪ್ಪುವವರು. ಆದರೆ ಅವರು ವಾದಿಸುವ ಸತ್ಕಾರ್ಯವಾದದ ಪ್ರಕಾರ ಕಾರ್ಯ ರೂಪದಲ್ಲಿ ಇರುವ ಜಗತ್ತೇ ಮತ್ತೆ ಹುಟ್ಟುವುದು. ಆದ್ದರಿಂದ ಜಗತ್ತು ಹುಟ್ಟುವ ಮುಂಚೆಯೇ ಇದೆ ಎಂದ ಮೇಲೆ ಅಂತಹ ಸತ್ಯ ಜಗತ್ತನ್ನು ಸೃಷ್ಟಿ ಮಾಡುವ ಮಹಿಮೆ ಪರಮಾತ್ಮನಲ್ಲಿ ಹೇಳಿದಂತಾಗುವುದಿಲ್ಲ.

ಸದಸತ್ಕಾರ್ಯವಾದವನ್ನು ಒಪ್ಪಿಕೊಳ್ಳುವ ನಮ್ಮ ಪ್ರಕಾರ ಕಾರಣರೂಪದಲ್ಲಿ ಇರುವ ಜಗತ್ತನ್ನು ಭಗವಂತನು ಕಾರ್ಯರೂಪದಲ್ಲಿ ಸೃಷ್ಟಿ ಮಾಡುವನು—ಎಂಬುದಾಗಿ ಜಗತ್ತಿನ ಸತ್ಯತ್ವವನ್ನೂ, ಅಂತಹ ಸತ್ಯ ಜಗತ್

ಸ್ರಷ್ಟೃತ್ವ ಮಹಿಮೆಯನ್ನೂ ಪ್ರತಿಪಾದಿಸಿದಂತಾಗುವುದು.

ಆದ್ದರಿಂದ ಜಗತ್ತಿನ ಸತ್ಯತ್ವವನ್ನು ಪ್ರತಿಪಾದಿಸಿ, ಪರಮಾತ್ಮನಲ್ಲಿ ಅಂತಹ ಸತ್ಯ ಜಗತ್ ಸ್ರಷ್ಟೃತ್ವ ಮಹಿಮೆಯನ್ನು ಸಮರ್ಥಿಸುವುದು ನಮ್ಮ ಮತದಲ್ಲಿ ಮಾತ್ರ ಸಾಧ್ಯ.

—ಶ್ರೀ ವಿದ್ಯಾಮಾನ್ಯತೀರ್ಥರು

x x x x

## ಪಂಚಾಯತನ ಪೂಜಾಪದ್ಧತಿಯ ನ್ಯೂನತೆ

'ಸಮಾನಾಂ ವಿಷಮಾ ಪೂಜಾ ವಿಷಮಾಣಾಂ ಸಮಾ ತಥಾ । ಕ್ರಿಯತೇ ಯೇನ ದೇವೋऽಪಿ ಸ್ವಪದಾದ್ ಭ್ರಶ್ಯತೇ ಧ್ರುವಮ್'—ಎಂಬುದಾಗಿ ಶ್ರೀ ಮಧ್ವಾಚಾರ್ಯರು ಕೃಷ್ಣಾಮೃತಮಹಾರ್ಣವದಲ್ಲಿ ಸಮಾನರಿಗೆ ವಿಷಮವಾದ ಪೂಜೆಯಂತೆ ವಿಷಮರಾದವರಿಗೆ ಸಮಾನವಾದ ಪೂಜೆ ಸ್ವಸ್ಥಾನ ಚ್ಯುತಿಗೆ ಕಾರಣವಾಗುವಷ್ಟು ದೊಡ್ಡ ಅಪರಾಧ ಎಂದು ಸಂದೇಶಿಸಿರುವರು. ಆದರೆ ಪಂಚಾಯತನ ಪೂಜಾಪದ್ಧತಿಪ್ರಕಾರ ಸೂರ್ಯ, ಗಣಪತಿ ಮುಂತಾದ ದೇವತೆಗಳನ್ನು ಒಂದೇ ಸ್ಥಳದಲ್ಲಿಟ್ಟು ಸಮಾನವಾಗಿ ಪೂಜಿಸಲಾಗುವುದು. ಮನೆಯಲ್ಲಿ ಯಾರು ಯಾರು ಯಾವ ಯಾವ ಸ್ಥಾನದಲ್ಲಿರಬೇಕೋ ಅಲ್ಲಿಯೇ ಇರುವಂತಾಗಬೇಕೇ ಹೊರತು ದನಕರುಗಳನ್ನೂ, ನಾಯಿಯನ್ನೂ, ಮನೆಯ ಯಜಮಾನನನ್ನೂ, ಯಜಮಾನಿನಿಯನ್ನೂ ಒಂದೇ ಕಡೆ ಇರಿಸಿ ಸಮಾನವಾಗಿಯೇ ಊಟೋಪಚಾರಗಳನ್ನು ಒದಗಿಸುವುದು ಸಮುಚಿತವಾದುದೇ ?

—ಶ್ರೀ ವಿದ್ಯಾಧೀಶತೀರ್ಥರು

x x x x

## ನಾಲ್ಕು ಪುರುಷಾರ್ಥಗಳಿಗೆ ಪ್ರಯೋಜಕಗಳಾದ ನಾಲ್ಕು ವೇದಗಳ ಸಾರ

'ನೇದೃಶಂ ಸ್ಥಲಮಲಂ ಶಮಲಘ್ನಂ'—ಪಾಪವನ್ನು ಪರಿಹರಿಸುವಲ್ಲಿ ಈ ಬದರೀಕಾಶ್ರಮಕ್ಕೆ ಸಾಟಿಯಾಗುವ ಮತ್ತೊಂದು ಕ್ಷೇತ್ರವಿಲ್ಲ.

'ನಾಸ್ಯ ತೀರ್ಥಸಲಿಲಸ್ಯ ಸಮಂ ವಾಃ'—ಈ ಗಂಗೆಗೆ ಸದೃಶವಾದ ತೀರ್ಥ ಇನ್ನೊಂದಿಲ್ಲ.

'ನಾಸ್ತಿ ವಿಷ್ಣುಸದೃಶಂ ನನು ದೈವಂ'—ವಿಷ್ಣುವಿಗೆ ಸಮಾನನಾದ ದೇವತೆ

ಮತ್ತೊಬ್ಬನಿಲ್ಲ.

'ನಾಸ್ಮದುಕ್ತಿಸದೃಶಂ ಹಿತರೂಪಂ'—ನಮ್ಮ ಉಪದೇಶದಂತಹ ಹಿತಕರ ಶಾಸ್ತ್ರ ಇನ್ನೊಂದಿಲ್ಲ.

ಶ್ರೀಮದಾಚಾರ್ಯರು ಬದರಿಯಲ್ಲಿ ಶ್ರೀ ವೇದವ್ಯಾಸರಲ್ಲಿಗೆ ತೆರಳುವಾಗ ತಮ್ಮ ಶಿಷ್ಯರಿಗೆ ನೀಡಿದ ಈ ನಾಲ್ಕು ಸಂದೇಶಗಳು, ನಾಲ್ಕು ವೇದಗಳ ಸಾರ; ಭಾವಿ ಚತುರ್ಮುಖನಿಂದ ಹೊರಹೊಮ್ಮಿದ ಇವು ನಾಲ್ಕು ವಿಧ ಪುರುಷಾರ್ಥಗಳಿಗೂ ಪ್ರಯೋಜಕವಾಗಬಲ್ಲವು.

—ಶ್ರೀ ಪ್ರಭಂಜನಾಚಾರ್ಯರು

x x x x

## 'ತಸ್ಯೈಕಸ್ಯ ಮಮತ್ವಂ ಹಿ'

'ತಸ್ಯೈಕಸ್ಯ ಮಮತ್ವಂ ಹಿ'—ಎಂದು ಮಹಾಭಾರತದಲ್ಲಿ ಸಂದೇಶಿಸಿರುವಂತೆ ಭಗವಂತನೊಬ್ಬನೇ ಸ್ವತಂತ್ರ. ಆದ್ದರಿಂದ ಎಲ್ಲರಿಗೂ, ಅವನೇ ಸುಖ ದುಃಖ ಪ್ರದ, ಅವನು ಆಯಾ ವ್ಯಕ್ತಿಗಳ ಸ್ವಭಾವಕ್ಕನುಗುಣವಾಗಿ ಶುಭಾಶುಭ ಕರ್ಮಗಳನ್ನೂ ಮಾಡಿಸಿ, ಅದಕ್ಕೆ ತಕ್ಕಂತೆ ಸುಖವನ್ನೋ ದುಃಖವನ್ನೋ ನೀಡುವನು. ಇದನ್ನು ವಿವೇಚಿಸದ ಜನರು ನಮ್ಮ ಸುಖದುಃಖಗಳಿಗೆ ಯಾರ್ಯಾರನ್ನೋ ನಿಮಿತ್ತರೆಂದು ಭ್ರಮಿಸುತ್ತಾರಷ್ಟೆ.

—ಶ್ರೀ ವಿದ್ಯಾಮಾನ್ಯತೀರ್ಥರು

x x x x

## ಧ್ಯಾನದ ಸಮಯದಲ್ಲಿ ಕಾಣಿಸುವುದು ವಾಸನಾಮಯ ಪ್ರತಿಮೆಯಷ್ಟೇ

ಜಡವಾದ ಪ್ರತಿಮೆಯೇ ದೇವರಲ್ಲ. ಅಂತೆಯೇ ಧ್ಯಾನದ ಸಂದರ್ಭದಲ್ಲಿ ಮನಸ್ಸಿನಲ್ಲಿ ಕಾಣಿಸುವ ರೂಪವೂ ದೇವರಲ್ಲ; ಅದು ಮನಸ್ಸಿನ ಸಂಸ್ಕಾರಗಳಿಂದ ರೂಪುಗೊಂಡ ವಾಸನಾಮಯವಾದ ಪ್ರತಿಮೆ. ಅದರಲ್ಲಿ ದೇವರು ಇದ್ದಾನೆಂದು ಅನುಸಂಧಾನ ಮಾಡಬೇಕೇ ಹೊರತು ಅದೇ ದೇವರೆಂದು ಚಿಂತಿಸಬಾರದು.

—ಶ್ರೀ ವಿಶ್ವೇಶತೀರ್ಥರು

x x x x

# ಮಹಿಮೆ :

### ಶಿಷ್ಯರೂಪದ ಗುರುಗಳನ್ನು ಕೊಟ್ಟ ಸ್ಥಳ

ಅಚ್ಯುತಪ್ರೇಕ್ಷರು ತಪಸ್ಸು ಮಾಡಿ ಶಿಷ್ಯರೂಪದ ಗುರುಗಳಾದ ಶ್ರೀ ಮಧ್ವರನ್ನು ಪಡೆದ ಸ್ಥಳ ಉಡುಪಿಯ ಅನಂತಾಸನ ದೇವಾಲಯ.

—ಶ್ರೀ ಪ್ರಭಂಜನಾಚಾರ್ಯರು

x x x x

### ಶ್ರೀಕೃಷ್ಣ ಲೀಲೆಗಳ ಅನಂತರದ ಲೀಲೆಗಳು

ಶ್ರೀಕೃಷ್ಣನ ಬಾಲಲೀಲೆಗಳ ಅನಂತರ ವೈಶಿಷ್ಟ್ಯಪೂರ್ಣಗಳೆಂದು ದಾಖಲಾಗಿರುವ ಬಾಲಲೀಲೆಗಳೆಂದರೆ ಶ್ರೀ ಮಧ್ವರದ್ದೇ.

—ಶ್ರೀ ಪ್ರಭಂಜನಾಚಾರ್ಯರು

x x x x

### ಶ್ರೀಕೃಷ್ಣನ ಗುರುದಕ್ಷಿಣೆಯಂತೆಯೇ ವಾಸುದೇವನ ಗುರುದಕ್ಷಿಣೆ

ಶ್ರೀಕೃಷ್ಣ ಗುರುಗಳಾದ ಸಾಂದೀಪನಿ ಆಚಾರ್ಯರಿಗೆ ಗುರುದಕ್ಷಿಣೆಯಾಗಿ ಅವರ ಮೃತ ಪುತ್ರನನ್ನು ತಂದೊಪ್ಪಿಸಿದನು. ವಾಸುದೇವನಾದರೂ ಸ್ವಾಭಾವಿಕ ವಾದ ಶಿರೋವೇದನೆಗೆ ಒಳಗಾಗಿದ್ದು ಮೃತಪ್ರಾಯನಾಗಿದ್ದ ತೋಟಂತಿಲ್ಲಾಯರ ಪುತ್ರನ ಶಿರೋವೇದನೆಯನ್ನು ಶಾಶ್ವತವಾಗಿ ಪರಿಹರಿಸಿ, ಅವನು ಚೆನ್ನಾಗಿ ಬದುಕುವಂತೆ ಮಾಡುವುದರ ಮೂಲಕ ಗುರುದಕ್ಷಿಣೆಯನ್ನು ಸಮರ್ಪಿಸಿರುವನು.

—ಶ್ರೀ ಪ್ರಭಂಜನಾಚಾರ್ಯರು

x x x x

### ಸಮುದ್ರವನ್ನೂ ಸಣ್ಣದಾಗಿಸುವ ವ್ಯಕ್ತಿತ್ವ

ನಾವು ಅಗಾಧವಾದ ಸಮುದ್ರದ ಎದುರು ಕುಬ್ಜರಾಗಿ ಕಾಣಿಸುವೆವು. ಆದರೆ ಶ್ರೀಮದಾಚಾರ್ಯರ ಉನ್ನತ ವ್ಯಕ್ತಿತ್ವದೆದುರು ಸಮುದ್ರವೂ ಸಣ್ಣದಾಗಿ ಕಾಣಿಸುತ್ತಿತ್ತು !

—ಶ್ರೀ ಪ್ರಭಂಜನಾಚಾರ್ಯರು

x x x x

## ವಯಸ್ಸಿನ ಪ್ರಭಾವಕ್ಕೊಳಗಾಗದ ಶಕ್ತಿ

ಇನ್ನೂ ಐದಾರು ವರ್ಷದ ಬಾಲಕರಾಗಿದ್ದಾಗ ಹಾಲಿನ ಬಾಂಡೆಯ ಮೇಲೆ ಅನೇಕ ಯುವಕರು ಸೇರಿಯೂ ಎತ್ತಲಾಗದಷ್ಟು ಭಾರದ ಶಿಲೆಯನ್ನು ಎತ್ತಿಟ್ಟು ತಮಗೆ ಬಾಲ್ಯಪ್ರಯುಕ್ತವಾದ 'ಶಕ್ತಿಹ್ರಾಸ' ಇಲ್ಲ ಎಂದು ತೋರಿಸಿಕೊಟ್ಟಿದ್ದ ಆಚಾರ್ಯರು ಸುಮಾರು ಎಪ್ಪತ್ತು ವರ್ಷ ದಾಟಿದ ಮೇಲೆ ಕಳಸದಲ್ಲಿ ಭದ್ರಾ ನದಿಯ ದಡದಲ್ಲಿ ಐವತ್ತು ಟನ್ ಭಾರದ ಶಿಲೆಯನ್ನು ಒಂದು ಕೈಯಿಂದ ಎತ್ತಿಟ್ಟು ತಮಗೆ ವಯಸ್ಸಾದ ಪ್ರಯುಕ್ತವೂ 'ಶಕ್ತಿಹ್ರಾಸ' ಇಲ್ಲ ಎಂದು ತೋರಿಸಿಕೊಟ್ಟಿದ್ದಾರೆ.

—ಶ್ರೀ ಪ್ರಭಂಜನಾಚಾರ್ಯರು

x x x x

## ಆಚಾರ್ಯರ ದರ್ಶನದ ಪ್ರಭಾವ

ದುಷ್ಟ ಜನರಿಂದ ಪ್ರಚೋದಿತನಾದ ಇಡೇತುದೇ ಗ್ರಾಮದ ಪಟೇಲ ಆಚಾರ್ಯರಿಗೆ ಹೊಡೆಯಬೇಕೆಂದು ಬಂದಿದ್ದ. ಆದರೆ ಆಚಾರ್ಯರನ್ನು ಕಾಣುತ್ತಲೇ, ಅವರ ವ್ಯಕ್ತಿತ್ವಕ್ಕೆ ಮಾರು ಹೋಗಿ ಅವರಿಗೆ ಶರಣಾಗತನಾದನು. ಆಚಾರ್ಯರ ದರ್ಶನವೂ ಎಷ್ಟೊಂದು ಪ್ರಭಾವಕಾರಿಯಾಗಿತ್ತೆಂಬುದಕ್ಕೆ ಇದು ಉತ್ತಮ ನಿದರ್ಶನ.

—ಶ್ರೀ ವಿಶ್ವೇಶತೀರ್ಥರು

x x x x

## ತತ್ವಜ್ಞಾನ ಗ್ರಂಥಾವಲಂಬಿ ಅಲ್ಲ

ಶ್ರೀ ರಾಮಚಂದ್ರನಿಂದ ಸೀತಾದೇವಿಯನ್ನು ಬೇರ್ಪಡಿಸಿದಂತಾಗುವುದೆಂದು ಭ್ರಮಿಸಿ ರಾವಣ ಸೀತಾಕೃತಿಯನ್ನು ಅಪಹರಿಸಿದಂತೆ ಶ್ರೀ ಮಧ್ವಾಚಾರ್ಯರಿಂದ ತತ್ವಜ್ಞಾನವನ್ನು ಬೇರ್ಪಡಿಸಿದಂತಾಗುವುದೆಂದು ಭ್ರಮಿಸಿ, ಅಂತಹ ತತ್ವಜ್ಞಾನಕ್ಕೆ ಆಕರಗಳಾದ ಅವರ ಗ್ರಂಥಗಳನ್ನು ಅಪಹರಿಸಲಾಯಿತು.

ಆದರೆ ಆಚಾರ್ಯರಲ್ಲಿ ತತ್ವಜ್ಞಾನ ಸ್ವಾಭಾವಿಕವಾದದ್ದೇ ಹೊರತು ಗ್ರಂಥಾವಲಂಬಿಯಾದುದಲ್ಲ.

—ಶ್ರೀ ಪ್ರಭಂಜನಾಚಾರ್ಯರು

x x x x

## ಕಳೆದು ಹೋದ ಗ್ರಂಥಗಳನ್ನು ದೊರಕಿಸಿಕೊಡುವ ಕ್ಷೇತ್ರ

ಆಚಾರ್ಯರ ಕಳವಾದ ಗ್ರಂಥಗಳ ಸುಳುಹು ದೊರಕಿದ್ದು ಕೋಡಿಪಾಡಿ ಜನಾರ್ದನ ಸ್ವಾಮಿಯ ಸನ್ನಿಧಿಯಲ್ಲಿ. ನಾವೂ ಇಲ್ಲಿಯ ಜನಾರ್ದನನ ಸೇವೆ ಮಾಡಿದ ವೆಂದರೆ ನಮ್ಮ ಪಾಲಿಗೆ ಕಳೆದು ಹೋದಂತಿರುವ 'ಬ್ರಹ್ಮತರ್ಕ' 'ಪಂಚರಾತ್ರ' 'ಪೈಂಗಿಶ್ರುತಿ' — ಮುಂತಾದವುಗಳನ್ನು ಪಡೆದುಕೊಳ್ಳಬಲ್ಲೆವು.

—ಶ್ರೀ ಪ್ರಭಂಜನಾಚಾರ್ಯರು

x x x x

## ವ್ಯಾಸ ದರ್ಶನಕ್ಕೆ ದಾಖಲೆ

ಆಚಾರ್ಯರು ಬದರಿಗೆ ಹೋಗಿ ಅಲ್ಲಿ ವ್ಯಾಸರ ದರ್ಶನವನ್ನು ಪಡೆದು ಕೊಂಡು ಬಂದುದಕ್ಕೆ ದಾಖಲೆಯಂತೆ ಇರುವವು ವ್ಯಾಸ ಮುಷ್ಟಿ ಎನಿಸುವ ಎಂಟು ಶುದ್ಧ ಶಿಲೆಗಳು. ಇವುಗಳಲ್ಲಿ ಒಂದು ಸೋದೆ ವಾದಿರಾಜ ಮಠದಲ್ಲೂ, ಇನ್ನೊಂದು ಸುಬ್ರಹ್ಮಣ್ಯ ಮಠದಲ್ಲೂ ಮತ್ತೆ ಐದು ಉತ್ತರಾದಿ ಮಠದಲ್ಲೂ ಆರಾಧಿಸಲ್ಪಡುತ್ತಿವೆ.

—ಶ್ರೀ ಪ್ರಭಂಜನಾಚಾರ್ಯರು

x x x x

## ಅಂಡರ್‌ಗ್ರೌಂಡ್ ಲೈಬ್ರರಿ

ಶ್ರೀಮದಾಚಾರ್ಯರು ಮುಂದೆ ಸರ್ವಮೂಲದ ಪಾಠ ಪೂರ್ಣವಾಗಿ ಕಲುಷಿತವಾದಾಗ ಶ್ರೀ ವಿಷ್ಣುತೀರ್ಥರು ಬಂದು ಶುದ್ಧ ಪಾಠವನ್ನು ಪ್ರಚುರಪಡಿಸ ಬೇಕೆಂದು ಕ್ರಾಸ್ ಮಾಡಿದ ಚೆಕ್ಕಿನಂತೆ, ರಿಜಿಸ್ಟರ್ಡ್ ಪೋಸ್ಟಿನಂತೆ ತಾಮ್ರದ ತಗಡುಗಳಲ್ಲಿ ಸರ್ವಮೂಲ ಗ್ರಂಥಗಳನ್ನು ಬರೆಸಿ ಭೂಗತ ಮಾಡಿರುವರು. ಇದೊಂದು ಶಾಸ್ತ್ರದ ಸಂರಕ್ಷಣೆಗಾಗಿ ವ್ಯವಸ್ಥೆಗೊಳಿಸಿರುವ 'ಅಂಡರ್‌ಗ್ರೌಂಡ್ ಲೈಬ್ರರಿ.'

—ಶ್ರೀಪ್ರಭಂಜನಾಚಾರ್ಯರು

x x x x

## ಗೌರವಾರ್ಹ ಶಿಲೆ

ವಿವೇಕಾನಂದ ಈಜುಕೊಂಡು ಹೋಗಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದ 'ಶಿಲೆ' ಎಂದು ಕನ್ಯಾಕುಮಾರಿಯಲ್ಲಿ ಒಂದು ಶಿಲೆಗೆ ಭಾರೀ ಪ್ರಾಶಸ್ತ್ಯವನ್ನು ನೀಡ

ಲಾಗುವುದು. ಹೀಗಿರುವಾಗ ಶ್ರೀಮದಾಚಾರ್ಯರು ಲೋಕೋಪಕಾರಕ್ಕಾಗಿ ಒಂದೇ ಕೈಯಿಂದ ಎತ್ತಿಟ್ಟ ಶಿಲೆ—ಎಂದ ಮೇಲೆ ಆ ಶಿಲೆಗೆ ಎಷ್ಟೊಂದು ಗೌರವ ಸಲ್ಲಬೇಕು !

—ಶ್ರೀ ಪ್ರಭಂಜನಾಚಾರ್ಯರು

x x x x

## ಕಿವಿಗೆ ಊದಿ ವೇದನೆಯನ್ನು ದೂರ ಮಾಡುವುದು

ವಾಸುದೇವ ತನ್ನ ಗುರುಗಳ ಪುತ್ರನ ಕಿವಿಗೆ ಗಾಳಿ ಊದಿ ಅವನ ಸ್ವಾಭಾವಿಕ ವಾಗಿದ್ದ ಶಿರೋವೇದನೆಯನ್ನು ಪರಿಹರಿಸಿದ್ದನು. ಹೀಗೆ ಶ್ರೀ ಮಧ್ವರು ವಾಸುದೇವನಾಗಿ ತನ್ನ ಗುರುಪುತ್ರನಿಗೆ ಮಾತ್ರವಲ್ಲ ಪ್ರತಿಯೊಬ್ಬ ಸಾತ್ವಿಕನಿಗೂ ತಮ್ಮ ಸರ್ವಮೂಲ ಗ್ರಂಥಗಳ ಉಪದೇಶವನ್ನು ಕಿವಿಗೆ ಊದುವರು; ಇದರಿಂದ ಅನಾದಿಯಾಗಿ ಬಂದಿರುವ ಸಂಸಾರವೇದನೆ ದೂರವಾಗುವುದು.

—ಶ್ರೀ ಪ್ರಭಂಜನಾಚಾರ್ಯರು

x x x x

## ಪ್ರಕೃತಿಯ ಪ್ರಭಾವವನ್ನು ಸ್ಥಗಿತಗೊಳಿಸಿರುವುದು

ಕಣ್ವತೀರ್ಥದಲ್ಲಿ ಪ್ರಕೃತಿಯ ಪ್ರಭಾವವನ್ನೇ ಸ್ಥಗಿತಗೊಳಿಸುವ ಎರಡು ಮಹಿಮೆಗಳು ನಡೆದಿವೆ. ಒಂದು ಶ್ರೀ ಮಧ್ವರ ಮೂಲಕ. ಶ್ರೀಮಧ್ವರು ಒಮ್ಮೆ ಸೂರ್ಯಗ್ರಹಣದ ಸಂದರ್ಭದಲ್ಲಿ ಸಮುದ್ರದ ಮೇಲೆ ತಮ್ಮ ಕಡೆಗಣ್ಣನ್ನು ಹಾಯಿಸಿ, ಸಮುದ್ರ ತರಂಗಗಳ ಅಬ್ಬರವಿಲ್ಲದೆ ಕೆರೆಯಂತೆ ಇರುವಂತೆ ಮಾಡಿದ್ದರು. ಮತ್ತೊಂದು ಶ್ರೀ ವಿಜಯಧ್ವಜತೀರ್ಥರ ಮೂಲಕ ನಡೆದ ಮಹಿಮೆ. ಅವರು ಭಾಗವತಕ್ಕೆ ವ್ಯಾಖ್ಯಾನ ಬರೆಯುತ್ತಿದ್ದ ಒಂದು ಸಂದರ್ಭದಲ್ಲಿ ಗಾಳಿಯ ವೇಗಕ್ಕೆ ಸಿಲುಕಿ ಚಂಚಲಗಳಾಗಿ 'ಕಲಕಲ' ಸದ್ದನ್ನು ಎಬ್ಬಿಸುತ್ತಿದ್ದ ಅಶ್ವತ್ಥವೃಕ್ಷದ ಎಲೆ ಗಳನ್ನು ನಿಶ್ಚಲಗೊಳಿಸಿದ್ದರು.

—ಶ್ರೀ ವಿಶ್ವೇಶತೀರ್ಥರು

x x x x

## ಭಕ್ತರ ಪರವಾಗಿ ವಿಜ್ಞಾಪಿಸಿಕೊಳ್ಳುವವರು

ಶ್ರೀಮದಾಚಾರ್ಯರು ಸರ್ವಮೂಲ ಗ್ರಂಥಗಳ ಮೂಲಕ ತತ್ವಜ್ಞಾನ ದೊರೆಯುವಂತೆ ಮಾಡಿ ಮಾತ್ರ ನಮ್ಮನ್ನು ಅನುಗ್ರಹಿಸುತ್ತಿರುವುದಲ್ಲ; ಶ್ರೀ

ರಾಘವೇಂದ್ರ ಸ್ವಾಮಿಗಳು ತಮ್ಮ 'ಪ್ರಾತಃಸಂಕಲ್ಪಗದ್ಯ'ದಲ್ಲಿ 'ತ್ವದಧೀನಂ ದೀನಂ ದೂನಂ ಅನಾಥಂ ಶರಣಾಗತಮೇನಮುದ್ಧರೇತಿ ವಿಜ್ಞಾಪನಕರ್ತೃಣಾಂ ...' ಎಂದು ತಿಳಿಸಿರುವಂತೆ ದೇವರೆದುರು ನಿನಗೆ ಅಧೀನನಾದ, ದೈನ್ಯಾವಸ್ಥೆಗೊಳಗಾದ, ದುಃಖಿಯಾದ, ನಿರ್ಗತಿಕನಾದ ನಿನ್ನಲ್ಲಿ ಶರಣಾಗತನಾದ ಈ ವ್ಯಕ್ತಿಯನ್ನು ಉದ್ಧಾರ ಮಾಡು—ಎಂದು ನಮ್ಮ ಪರವಾಗಿ ವಿಜ್ಞಾಪಿಸಿಕೊಳ್ಳುವ ಮೂಲಕವೂ ಅನುಗ್ರಹಿಸುವರು.

—ಶ್ರೀ ವಿದ್ಯಾಧೀಶತೀರ್ಥರು

x x x x

### ಉಜಿರೆಯಲ್ಲಿಯ 'ಉಚ್ಚಭೂತಿ'

ಕಾಲಕಾಲಕ್ಕೆ ಜನರ ಅಭಿರುಚಿ, ನಡತೆ, ಸಂಸ್ಕೃತಿಗಳೆಲ್ಲ ಬದಲಾಗುತ್ತಿರುವಂತೆ ಕೆಲವು ಹೆಸರುಗಳಲ್ಲಿಯೂ ಮಾರ್ಪಾಟು ಆಗುವುದುಂಟು.

ಈಗ 'ಉಜಿರೆ' ಎಂದೆನಿಸುವಂತಹದ್ದನ್ನು ಸುಮಧ್ವವಿಜಯದಲ್ಲಿ 'ಉಚ್ಚಭೂತಿ' —ಎಂದು ಉಲ್ಲೇಖಿಸಲಾಗಿದೆ. 'ಉಚ್ಚಭೂತಿ'ಯೇ ಕ್ರಮೇಣ ವಿಕಾರಗಳಿಗೊಳಗಾಗಿ 'ಉಜಿರೆ' ಎನಿಸಿದ್ದಿರಬಹುದು. ಉಜಿರೆ ಶ್ರೇಷ್ಠ ಸಂಪತ್ತನ್ನೊಳಗೊಂಡದ್ದರಿಂದ 'ಉಚ್ಚಭೂತಿ' ಎನಿಸುತ್ತಿತ್ತು. ಆ ಸಂಪತ್ತು ಲೌಕಿಕವಾದುದಲ್ಲ; ಆಧ್ಯಾತ್ಮಿಕ ಸಂಪತ್ತು, ಧಾರ್ಮಿಕ ಸಂಪತ್ತು. ಅಂತಹ ಸಂಪತ್ತುಗಳಲ್ಲಿ ಜಗದ್ಗುರುಗಳಾದ ಶ್ರೀ ಮಧ್ವಾಚಾರ್ಯರ ಆಗಮನ, ಸ್ಪರ್ಶ—ಮುಂತಾದವೂ ಸೇರಿಕೊಂಡಿವೆ. ಜಗದ್ಗುರುಗಳಾದ ಶ್ರೀ ಮಧ್ವಾಚಾರ್ಯರು ಕುಳಿತು ಪ್ರವಚನ ನೀಡಿದ್ದಿರಬಹುದಾದ, ಅಥವಾ ಕುಳಿತು ಕರ್ಮನಿರ್ಣಯವನ್ನು ರಚಿಸಿದ್ದಿರಬಹುದಾದ—ಶಿಲೆ ಈಗಲೂ ಉಜಿರೆಯ ಪಾಲಿಗೆ 'ಉಚ್ಚಭೂತಿ'ಯಾಗಿ ಮೆರೆಯುತ್ತಿದೆ

—ಶ್ರೀ ವಿದ್ಯಾಧೀಶತೀರ್ಥರು

x x x x

### 'ಸಕಲಜ್ಞ' ಎಂಬ ಸಂಬೋಧನೆ ನಡೆದ ಕ್ಷೇತ್ರ

ಶ್ರೀ ಮಧ್ವಾಚಾರ್ಯರ ಸರ್ವಜ್ಞತ್ವವನ್ನು ಗುರುತಿಸಿಕೊಂಡ ವಿದ್ವಾಂಸರಿಂದ ಅವರನ್ನು 'ಸಕಲಜ್ಞ' —ಎಂದು ಮೊತ್ತಮೊದಲು ಎಲ್ಲಿ ಸಂಬೋಧಿಸಲಾಗಿತ್ತೋ ಅಂತಹ ಕ್ಷೇತ್ರ ಅಡೂರಿನ ಮಹಾಲಿಂಗೇಶ್ವರ ದೇವಾಲಯ.

—ಶ್ರೀ ಪ್ರಭಂಜನಾಚಾರ್ಯರು

x x x x

## ಸಾಧನೆ :

### ಯಾರ ಸಂಗಡ ಯಾತ್ರೆ?

"ಪಾತ್ರರ ಸಂಗಡ ಯಾತ್ರೆಯ ಮಾಡಿ......."—ಎಂಬುದಾಗಿ ದಾಸರು ಯಾತ್ರೆಯನ್ನು ಯಾರಯಾರದ್ದೋ ಜೊತೆಗೆ ನಡೆಸದೆ ಪಾತ್ರರ ಸಂಗಡವೇ ನಡೆಸ ಬೇಕೆಂದು ಸಂದೇಶಿಸಿರುವರು.

ಯಾರು ಪಾತ್ರರು?

ಭಗವದನುಗ್ರಹ ಪಾತ್ರರು; ನಮ್ಮನ್ನೂ ಭಗವದನುಗ್ರಹಪಾತ್ರರನ್ನಾಗಿ ಮಾಡುವವರು ಪಾತ್ರರು.

ಅಲ್ಲದೆ, ಶಾಸ್ತ್ರವನ್ನು ಪಾನ ಮಾಡುವವರು; ಹಾಗೂ ಶಾಸ್ತ್ರದ ಪಾನ ಮಾಡಿಸುವವರು ಪಾತ್ರರು.

'ಪಾತೃತ್ವಾತ್ ಪಾತ್ರಂ......." —ಎನ್ನುತ್ತಿದೆ ಈಶಾವಾಸ್ಯೋಪ ನಿಷದ್ಭಾಷ್ಯ.

—ಶ್ರೀ ವಿದ್ಯಾಧೀಶತೀರ್ಥರು

x x x x

### ದಂಡತೀರ್ಥ ನಾಮದ ಸೂಚನೆ

ತೀರ್ಥ ಅಂದರೆ ಶಾಸ್ತ್ರ ದೊರಕಬೇಕಾದರೆ ದಂಡ ಅಂದರೆ ದಂಡನೆ ಬೇಕು. ದೇಹದಂಡನೆ ಎನಿಸುವ ಉಪವಾಸ ವ್ರತಾದಿಗಳು, ವಾಗ್ದಂಡನೆ ಎನಿಸುವ ಮೌನ, ಮನೋದಂಡನೆ ಎನಿಸುವ ಪ್ರಾಣಾಯಾಮ. ಯೋಗಾದಿಗಳನ್ನು ಅಳವಡಿಸಿ ಕೊಂಡಾಗಷ್ಟೇ ಶಾಸ್ತ್ರ ನಮ್ಮ ಪಾಲಿಗೆ ತೀರ್ಥ ಎನಿಸೀತು. ಅಂದರೆ ತಾರಯತೀತಿ ತೀರ್ಥಂ—ಎಂಬುದಾಗಿ ಸಂಸಾರತಾರಕ ಆದೀತು!

'ದಂಡತೀರ್ಥ' ಎಂಬ ಹೆಸರು ಸಾಧನೆಯ ಈ ರಹಸ್ಯವನ್ನು ಸಾರುತ್ತಿದೆ.

—ಶ್ರೀ ವಿದ್ಯಾಧೀಶತೀರ್ಥರು

x x x x

## ಮನಸ್ಸಿನ ಒಡೆಯ ಬೇರೆ ಚಾಲಕ ಬೇರೆ

ವಾಹನಕ್ಕೆ ಒಬ್ಬ ಒಡೆಯನಾಗಿದ್ದರೆ, ಚಾಲಕ ಮತ್ತೊಬ್ಬನಿರುತ್ತಾನೆ. ಅಂತೆಯೇ ಮನಸ್ಸಿನ ಒಡೆಯ ಭಗವಂತನಾದರೆ, ಅದರ ಅಭಿಮಾನಿಯಾದ ರುದ್ರ-ದೇವನೇ ಅದರ ಚಾಲಕ ಎನಿಸಿರುವನು. ವಾಹನದ ಸರಿಯಾದ ಬಳಕೆಗೆ ಅದರ ಒಡೆಯ ಹಾಗೂ ಚಾಲಕರಿಬ್ಬರ ಸಹಕಾರವೂ ಬೇಕಾದಂತೆ ಮನಸ್ಸಿನ ಸದುಪಯೋಗ ದೊರಕಲು ಅದರ ಒಡೆಯನಾದ ಭಗವಂತನ ಹಾಗೂ ಚಾಲಕನಾದ ರುದ್ರದೇವನ ಅನುಗ್ರಹ ಬೇಕು.

—ಶ್ರೀ ವಿದ್ಯಾಧೀಶತೀರ್ಥರು

x x x x

## ದೇವತೆಗಳಿಂದ ಏಕಕಾಲದಲ್ಲಿ ಎಲ್ಲ ಆಶ್ರಮಗಳ ಅನುಷ್ಠಾನ

ನಿರಂಶರಾದ ಮಾನವರು ಏಕಕಾಲಕ್ಕೆ ಒಂದೇ ಶರೀರವನ್ನು ಪಡೆದಿದ್ದು, ಆ ಶರೀರದ ಮೂಲಕ ಬ್ರಹ್ಮಚರ್ಯ, ಗಾರ್ಹಸ್ಥ್ಯ ಹಾಗೂ ಸನ್ಯಾಸ ಆಶ್ರಮಗಳಲ್ಲಿ ಯಾವುದಾದರೂ ಒಂದು ಆಶ್ರಮವನ್ನಷ್ಟೇ ಅಳವಡಿಸಿಕೊಳ್ಳಬಹುದಾಗುತ್ತದೆ. ಆದರೆ ಸಾಂಶರಾದ ದೇವತೆಗಳು ಬೇರೆ ಬೇರೆ ಅಂಶದಿಂದ ಏಕಕಾಲದಲ್ಲಿಯೇ ಬೇರೆ ಬೇರೆ ದೇಹವನ್ನು ಧಾರಣೆ ಮಾಡಿ ಒಂದೊಂದು ದೇಹದ ಮೂಲಕ ಒಂದೊಂದು ಆಶ್ರಮವನ್ನು ಪಾಲಿಸುತ್ತ ಒಂದೇ ಕಾಲದಲ್ಲಿ ಎಲ್ಲ ಆಶ್ರಮಗಳನ್ನೂ ಅಳವಡಿಸಿಕೊಳ್ಳಬಹುದಾಗಿದೆ.

—ಶ್ರೀ ವಿದ್ಯಾಧೀಶತೀರ್ಥರು

x x x x

## ವಾಯುದೇವರಿಂದ ಏಕಕಾಲದಲ್ಲಿ ಮೂರೂ ಆಶ್ರಮಗಳ ಅನುಷ್ಠಾನ

ದೇವೋತ್ತಮರಾದ ವಾಯುದೇವರು ತಮ್ಮ ಹನುಮದ್ರೂಪದಲ್ಲಿ ಬ್ರಹ್ಮಚರ್ಯವನ್ನೂ, ಭೀಮರೂಪದಲ್ಲಿ ಗಾರ್ಹಸ್ಥ್ಯವನ್ನೂ, ಮಧ್ವರೂಪದಲ್ಲಿ ಸನ್ಯಾಸವನ್ನು ಪಾಲಿಸುತ್ತ ಸಾಂಶದೇವತೆಗಳು ಏಕಕಾಲದಲ್ಲಿ ಎಲ್ಲ ಆಶ್ರಮಗಳನ್ನು ಹೇಗೆ ಅಳವಡಿಸಿಕೊಂಡಿರುತ್ತಾರೆ—ಎಂಬುದಕ್ಕೆ ಉತ್ತಮ ನಿದರ್ಶನರಾಗಿದ್ದಾರೆ.

—ಶ್ರೀ ಪ್ರಭಂಜನಾಚಾರ್ಯರು

x x x x

## ಗುರುಗಳನ್ನು ಹಿಂಬಾಲಿಸಿದ್ದರ ಫಲ

ಅದೃಶ್ಯ ಬದರಿಗೆ ತೆರಳಿದ್ದ ಆಚಾರ್ಯರ ವಿರಹವನ್ನು ತಾಳಲಾರದೆ ಅವರನ್ನು ಹಿಂಬಾಲಿಸಿದ್ದರು ಸತ್ಯತೀರ್ಥ ಯತಿಗಳು. ಹೀಗೆ ಗುರುಗಳನ್ನು ಹಿಂಬಾಲಿಸಿದ್ದರ ಫಲವಾಗಿಯೇ ಅವರಿಗೆ ಸೂತ್ರಭಾಷ್ಯದ ಬರವಣಿಗೆಯ ಸೌಭಾಗ್ಯ ದೊರಕಿತು. 'ಸಾಧನಸ್ಯೋತ್ತಮತ್ವೇನ ಸಾಧ್ಯಂ ಚೋತ್ತಮಮಾಪ್ನುಯುಃ'—ಎಂಬುದಾಗಿ ಸಾಧನೆಯಲ್ಲಿಯ ತಾರತಮ್ಯಕ್ಕನುಗುಣವಾಗಿ ಸಿದ್ಧಿಯೂ ದೊರಕುವುದೆಂದು ಆಚಾರ್ಯರು ಸಂದೇಶಿಸಿದ್ದಾರೆ ತಾನೇ ?

—ಶ್ರೀ ಪ್ರಭಂಜನಾಚಾರ್ಯರು

x x x x

## ಉಡುಪಿ ಶ್ರೀಕೃಷ್ಣನಿಂದ ಪರಿಹಾರವಾಗುವ ಸಮಸ್ಯೆಗಳು

ಉಡುಪಿ ಶ್ರೀಕೃಷ್ಣ ಶ್ರೀಮದಾಚಾರ್ಯರಿಂದ 'ಸಿದ್ಧಿವಿಘ್ನಮುಖ-ದೋಷಭೇಷಜ'—ನಾಗಿ ಪ್ರತಿಷ್ಠಾಪಿಸಲ್ಪಟ್ಟಿರುವನು.

ಪಾಠಪ್ರವಚನ, ಶಾಸ್ತ್ರಾಧ್ಯಯನ—ಮುಂತಾದ ಸಾಧನೆಗಳಿಗೆ, 'ಮಗಳಿಗೆ ವಿವಾಹ ಆಗಿಲ್ಲ' 'ನೌಕರಿ ದೊರಕಿಲ್ಲ'—ಮುಂತಾದ ಲೌಕಿಕಸಮಸ್ಯೆಗಳು ತಡೆ ಒಡ್ಡುವವು. ಉಡುಪಿ ಶ್ರೀಕೃಷ್ಣನ ದರ್ಶನದಿಂದ ಇಂತಹ ಸಮಸ್ಯೆಗಳ ಪರಿಹಾರ ದೊರಕಿ ನಿಶ್ಚಿಂತೆಯಿಂದ ಪಾಠಪ್ರವಚನಾದಿಗಳನ್ನು ನಡೆಸಲು ಸೌಕರ್ಯವಾಗುವುದು.

—ಶ್ರೀ ಪ್ರಭಂಜನಾಚಾರ್ಯರು

x x x x

## ಎರಡು ಬಗೆಯ ಶಾಸ್ತ್ರ ಸಂರಕ್ಷಣೆ

ಪಾಠಪ್ರವಚನ, ಲೇಖನ, ಉಪನ್ಯಾಸ—ಮುಂತಾದವುಗಳಿಂದ ಶಾಸ್ತ್ರದ ಒಂದು ಬಗೆಯ 'ಸಂರಕ್ಷಣೆ' ನಡೆಸಬೇಕಾದಂತೆ ಶಾಸ್ತ್ರದ ಪುಸ್ತಕಗಳು ಹಾಳಾಗದಂತೆ ಜಾಗ್ರತೆ ವಹಿಸುವುದು ಮತ್ತೊಂದು ಬಗೆಯ ಶಾಸ್ತ್ರಸಂರಕ್ಷಣೆ, ಈ ಎರಡೂ ಬಗೆಯ ಶಾಸ್ತ್ರಸಂರಕ್ಷಣೆ ಶಾಸ್ತ್ರಜ್ಞರ ಕರ್ತವ್ಯ.

ಸರ್ವಮೂಲ ಗ್ರಂಥಗಳನ್ನು ಸಂರಕ್ಷಿಸುವುದಕ್ಕಾಗಿ ಭೂಗತಗಳನ್ನಾಗಿ

ಮಾಡಿರುವ ಆಚಾರ್ಯರು ಗ್ರಂಥಗಳ ರಕ್ಷಣೆಯ ಮೂಲಕ ಶಾಸ್ತ್ರಸಂರಕ್ಷಣೆಯ ಅವಶ್ಯಕತೆಯನ್ನು ತೋರಿಸಿಕೊಟ್ಟಿರುವರು.

—ಶ್ರೀ ಪ್ರಭಂಜನಾಚಾರ್ಯರು

x x x x

## ವೇದವ್ಯಾಸರ ದರ್ಶನಕ್ಕೆ ಮೌನ ವ್ರತದಿಂದ ಪಾವಿತ್ರ್ಯ

ಶಾಸ್ತ್ರಕ್ಕೆ ಸಂಬಂಧಿಸದ ವಿಚಾರಗಳ ಕುರಿತು ಮಾತನಾಡದಿರುವುದೇ ಮೌನ. ಇಂತಹ ಮೌನ ಜ್ಞಾನಿಗಳ ಲಕ್ಷಣ. 'ಪ್ರಲಾಪಸ್ಯ ಚ ವರ್ಜನೇ.......'— ಎಂಬುದಾಗಿ ಭೀಮಸೇನನಲ್ಲಿ ಈ ಬಗೆಯ ಮೌನವಿತ್ತೆಂದು ಉಲ್ಲೇಖಿಸಲಾಗಿದೆ.

ಶ್ರೀಮದಾಚಾರ್ಯರು 48 ದಿನಗಳ ಕಾಲ ಪವಿತ್ರವಾದ ಇಂತಹ ಮೌನವ್ರತವನ್ನು ಮಾಡಿ ಪರಮಪವಿತ್ರರಾದ ಶ್ರೀ ವೇದವ್ಯಾಸರ ಸನ್ನಿಧಿಗೆ ತೆರಳಿದರು.

—ಶ್ರೀ ಪ್ರಭಂಜನಾಚಾರ್ಯರು

x x x x

## ಬರಿಗೈಯಲ್ಲಿ ಹೋಗಬಾರದು

'ರಿಕ್ತಹಸ್ತೋ ನ ಗಚ್ಛೇತ್ ರಾಜಾನಂ ದೇವತಾಂ ಗುರುಮ್'

ಎಂಬುದಾಗಿ ರಾಜನಲ್ಲಿಗೆ, ಗುರುಗಳಲ್ಲಿಗೆ, ದೇವರಲ್ಲಿಗೆ ಹೋಗುವಾಗ ಬರಿಗೈಯಲ್ಲಿ ಹೋಗಬಾರದು. ಅವರಿಗೆ ಪ್ರಿಯವಾಗುವ ಯಾವುದಾದರೊಂದು ಪದಾರ್ಥವನ್ನು ಹಿಡಿದುಕೊಂಡು ಹೋಗಬೇಕೆಂದು ಧರ್ಮಶಾಸ್ತ್ರ ತಿಳಿಸಿದೆ.

ಆದ್ದರಿಂದಲೇ ಆಚಾರ್ಯರು ಜಗದ್ಗುರು ಆದ ಬದರೀನಾರಾಯಣನಲ್ಲಿಗೆ ಹೋಗುವಾಗ ಅವನಿಗೆ ಅತ್ಯಂತ ಪ್ರಿಯ ಎನಿಸಬಲ್ಲ ಗೀತಾಭಾಷ್ಯವನ್ನು ರಚಿಸಿಕೊಂಡೊಯ್ದಿದ್ದರು.

—ಶ್ರೀ ಪ್ರಭಂಜನಾಚಾರ್ಯರು

x x x x

## ಗ್ರಂಥ ಸಮರ್ಪಣೆಯ ವಿಧಾನ

ಪಾಠ ಪ್ರವಚನಗಳಿಗೆ ಯೋಗ್ಯವಾದ ಗ್ರಂಥವನ್ನು ಭಗವಂತನಿಗೆ ಸಮರ್ಪಿಸುವುದೆಂದರೆ ಆ ಗ್ರಂಥದ ಕುರಿತ ಅವನ ಸನ್ನಿಧಿಯಲ್ಲಿ ಪಾಠಪ್ರವಚನವನ್ನು

ನಡೆಸುವುದೇ ಆಗಿದೆ. ಈ ರಹಸ್ಯವನ್ನು ಬಲ್ಲ ಆಚಾರ್ಯರು ಬದರಿನಾರಾಯಣನ ಸನ್ನಿಧಿಯಲ್ಲಿ ಗೀತಾಭಾಷ್ಯದ ಪ್ರವಚನ ನಡೆಸುವುದರ ಮೂಲಕವೇ ಅದನ್ನು ಅವನಿಗೆ ಸಮರ್ಪಿಸಿರುವರು.

—ಶ್ರೀ ಪ್ರಭಂಜನಾಚಾರ್ಯರು

x x x x

## 'ಧ್ಯಾನಂ ನಿಶ್ಚಿತತತ್ವಸ್ಯ'

ನೀರು ಕಲುಷಿತವಾಗಿದ್ದರೆ, ಅಥವಾ ಅಲ್ಲೋಲಕಲ್ಲೋಲವಾಗಿದ್ದರೆ—ಅಂತಹ ನೀರಿನಲ್ಲಿ ಪ್ರತಿಬಿಂಬ ಕಾಣಿಸುವುದಿಲ್ಲ. ಅಂತೆಯೇ ಅಂತಃಕರಣ ಅಜ್ಞಾನ ವಿಪರೀತ ಜ್ಞಾನಗಳಿಂದ ಕಲುಷಿತವಾಗಿದ್ದಲ್ಲಿ, ಸಂಶಯಗಳಿಂದ ತೊಳಲಾಡುತ್ತಿದ್ದಲ್ಲಿ ಅಂತಹ ಅಂತಃಕರಣದಲ್ಲಿ ದೇವರ ರೂಪವನ್ನು ಧ್ಯಾನಿಸಲು ಸಾಧ್ಯವಿಲ್ಲ. ಅದಕ್ಕಾಗಿಯೇ ಶ್ರೀಮದಾಚಾರ್ಯರು 'ಧ್ಯಾನಂ ನಿಶ್ಚಿತತತ್ವಸ್ಯ....' —ಎಂಬುದಾಗಿ ಶ್ರವಣ ಮನನಗಳಿಂದ ಸಂಶಯ, ಅಜ್ಞಾನಗಳನ್ನು ಪರಿಹರಿಸಿ ತತ್ವನಿಶ್ಚಯದಿಂದ ಪ್ರಶಾಂತವಾಗುವ ಅಂತಃಕರಣದಲ್ಲಿ ಭಗದದ್ರೂಪವನ್ನು ಧ್ಯಾನಿಸಬೇಕು ಎಂದು ಸಂದೇಶಿಸಿರುವರು.

—ಶ್ರೀ ವಿಶ್ವೇಶತೀರ್ಥರು

x x x x

## ಶಾಸ್ತ್ರಮೇಘದಿಂದ ತತ್ವಜ್ಞಾನದ ವೃಷ್ಟಿ

ಎರ್ಕಿ ಮಠದ ಸರೋವರದಲ್ಲಿ ಗ್ರೀಷ್ಮಕಾಲದಲ್ಲಿ ಮೋಡಗಳನ್ನು ತರಿಸಿ, ಮಳೆ ಬರಿಸಿ ನೀರಿಲ್ಲದೆ ತಪ್ತರಾಗಿದ್ದ ಜನರ ತಾಪಗಳನ್ನು ಪರಿಹರಿಸಿದ್ದ ಶ್ರೀಮದಾಚಾರ್ಯರು ಶಾಸ್ತ್ರ ಮೇಘಗಳ ಮೂಲಕ ತತ್ವಜ್ಞಾನದ ಮಳೆಯನ್ನೂ ಸುರಿಸಿ ಸಾತ್ವಿಕರು ಸಾಂಸಾರಿಕ ತಾಪಗಳಿಂದ ದೂರವಾಗುವುದಕ್ಕೂ ಅನುಗ್ರಹಿಸಿರುವರೆಂಬುದನ್ನು ಮರೆಯುವಂತಿಲ್ಲ.

—ಶ್ರೀ ವಿಶ್ವೇಶತೀರ್ಥರು

x x x x

## ರುದ್ರದೇವನಿಂದ ವಿಷ್ಣು ಸರ್ವೋತ್ತಮತ್ವದ ಹಾಗೂ ವಾಯು ಜೀವೋತ್ತಮತ್ವದ ಸಾಧನೆ

ರುದ್ರದೇವನು ತಲೆಯಲ್ಲಿ ವಿಷ್ಣುಪಾದೋದಕವಾದ ಗಂಗೆಯನ್ನು ಹೊತ್ತುಕೊಂಡಿರುವ ಮೂಲಕ ವಿಷ್ಣುಸರ್ವೋತ್ತಮತ್ವವನ್ನು ಸಾರುತ್ತಿದ್ದರೆ, ಚತುರ್ಮುಖನ ಆವೇಶಕ್ಕೊಳಗಾದ ಚಂದ್ರನನ್ನು ತಲೆಯಲ್ಲಿ ಹೊತ್ತುಕೊಂಡಿರುವ

ಮೂಲಕ ಭಾವಿ ಚತುರ್ಮುಖನಾದ ವಾಯುದೇವನ ಜೀವೋತ್ತಮತ್ವವನ್ನು ಸಾರುತ್ತಿದ್ದಾನೆ. ಆದ್ದರಿಂದಲೇ 'ವೈಷ್ಣವಾನಾಂ ಯಥಾ ಶಂಭುಃ' ಎಂದೆನಿಸು ವಷ್ಟು ವೈಷ್ಣವಾಗ್ರೇಸರನಾಗಿ ಅವನು ಪರಿಗಣಿಸಲ್ಪಟ್ಟಿರುವನು.

—ಶ್ರೀ ಪ್ರಭಂಜನಾಚಾರ್ಯರು

x x x x

## ಮಧ್ವರ ಬೆನ್ನು ಹಿಡಿದರೆ ದೇವರನ್ನು ಕಾಣಬಹುದು

ವಾಸುದೇವನನ್ನು ಹುಡುಕಿಕೊಂಡು ಹೋದ ಮಧ್ಯಗೇಹ ಭಟ್ಟರಿಗೆ ಅನಂತಾ ಸನನ ದರ್ಶನ ದೊರಕಿತು. ಶ್ರೀ ಮಧ್ವರ ದರ್ಶನ ಪಡೆದರೆ, ಬೆನ್ನು ಹಿಡಿದರೆ ದೇವರನ್ನು ಕಾಣಬಹುದೆಂಬುದು ಇದರಿಂದ ಸೂಚಿತ.

—ಶ್ರೀ ಪ್ರಭಂಜನಾಚಾರ್ಯರು

x x x x

## ಶ್ರೀ ಮಧ್ವರ ಉಪದೇಶದ ಗಾಳಿಯಿಂದ ವೇದನೆಯ ಪರಿಹಾರ!

'ಅಹಂ ಕರ್ತಾ' —ನಾನೇ ಮಾಡುವವನು ಎಂಬ ಅಹಂಕಾರವೇ ಎಲ್ಲ ವೇದನೆಗಳಿಗೆ ಮೂಲವಾಗಿದ್ದು, 'ನಾಹಂ ಕರ್ತಾ ಹರಿಃ ಕರ್ತಾ....'—ನಾನು ಸ್ವತಂತ್ರಕರ್ತೃ ಅಲ್ಲ; ಶ್ರೀಹರಿಯೇ ಸ್ವತಂತ್ರಕರ್ತೃ—ಎಂಬ ಶ್ರೀ ಮಧ್ವಾಚಾರ್ಯರ ಉಪದೇಶದ ಗಾಳಿ ನಮ್ಮ ಕಿವಿಯೊಳಗೆ ಹೊಕ್ಕಿತೆಂದರೆ ಅಂತಹ ಅಹಂಕಾರ ಪ್ರಯುಕ್ತವಾದ ವೇದನೆ ದೂರವಾದೀತು! ವಾಸುದೇವನಿಂದ ಕಿವಿಯಲ್ಲಿ ಊದಿಸಿ ಕೊಳ್ಳಲ್ಪಟ್ಟ ತೋಟಂತಿಲ್ಲಾಯರ ಪುತ್ರನ ತಲೆನೋವು ಹೇಗೆ ಪರಿಹಾರ ವಾಯಿತೋ ಹಾಗೆ.

—ಶ್ರೀ ಪ್ರಭಂಜನಾಚಾರ್ಯರು

x x x x

## ಐವತ್ತು ಶ್ಲೋಕಗಳಲ್ಲಿ ಏಕಾದಶೀ ವ್ರತದ ಮಾಹಿತಿ

'ವೈದ್ಯನಾಥ' ಎಂದು ಪ್ರಸಿದ್ಧನಾಗಿರುವ ಕೊಕ್ಕಡದ ಮಹಾಲಿಂಗೇಶ್ವರನ ಸನ್ನಿಧಾನದಲ್ಲಿ ವೈದ್ಯಶಾಸ್ತ್ರಕ್ಕೆ ಅನುಗುಣವಾಗಿ ರಚಿತವಾದದ್ದು ಶ್ರೀಕೃಷ್ಣಾಮೃತ ಮಹಾರ್ಣವ. "ಲಂಘನಂ ಪರಮೌಷಧಮ್" —ಎಂಬುದಾಗಿ ವೈದ್ಯಶಾಸ್ತ್ರದಲ್ಲಿ ಉಪವಾಸಕ್ಕೆ ಎಲ್ಲಿಲ್ಲದ ಮಹತ್ತ್ವವನ್ನು ನೀಡಲಾಗಿದೆ ಅಂತಹ ಉಪವಾಸವೇ

ಪ್ರಧಾನ ಅಂಗವಾಗಿ ಉಳ್ಳ ಏಕಾದಶೀ ವ್ರತದ ಬಗ್ಗೆ 230 ಶ್ಲೋಕಗಳ ಕೃಷ್ಣಾಮೃತ ಮಹಾರ್ಣವದಲ್ಲಿ 50 ಶ್ಲೋಕಗಳನ್ನು ಮೀಸಲಾಗಿರಿಸುವುದರ ಮೂಲಕ ಏಕಾದಶೀ ವ್ರತಕ್ಕೆ, ಉಪವಾಸಾಚರಣೆಗೆ ತುಂಬ ಒತ್ತು ನೀಡಲಾಗಿದೆ.

—ಶ್ರೀ ಪ್ರಭಂಜನಾಚಾರ್ಯರು

x x x x

## ರುದ್ರನ ಆರಾಧನೆಯ ಫಲ

ದಕ್ಷಿಣಕನ್ನಡ ಜಿಲ್ಲೆಯಲ್ಲಿ ರುದ್ರ ದೇವಾಲಯಗಳು ಹೆಚ್ಚಿನ ಸಂಖ್ಯೆಯಲ್ಲಿದ್ದು ರುದ್ರನ ಆರಾಧನೆ ವಿಶೇಷವಾಗಿ ನಡೆಯುತ್ತಿದೆ ಮನೋಭಿಮಾನಿಯಾದ ರುದ್ರನ ಆರಾಧನೆ ವಿಶೇಷವಾಗಿ ನಡೆಯುವುದರಿಂದಲೇ ಇಲ್ಲಿಯ ಜನ ಹೆಚ್ಚು ಬುದ್ಧಿವಂತರಾಗಿದ್ದಿರಬಹುದು. ಬುದ್ಧಿವಂತಿಕೆ ಭಗವಂತನ ಕಡೆಗೆ, ಅಧ್ಯಾತ್ಮದ ಕಡೆಗೆ ಹರಿದರೆ ಸಾರ್ಥಕವೆನಿಸೀತು !

—ಶ್ರೀ ಪ್ರಭಂಜನಾಚಾರ್ಯರು

x x x x

## ನಾಡಗೀತೆಯಲ್ಲಿ ಶ್ರೀ ಮಧ್ವರನ್ನು ತ್ಯಜಿಸಿರುವುದರ ಬಗ್ಗೆ ಪ್ರತಿಭಟನೆ ಸಲ್ಲಬೇಕು

ಶ್ರೀ ಮಧ್ವಾಚಾರ್ಯರು ಅತ್ಯಂತ ಪ್ರತಿಭಾಶಾಲಿಗಳಾದ ತತ್ವಜ್ಞಾನಿಗಳು; ಜಗದ್ಗುರುಗಳು. ಕನ್ನಡನಾಡಿನ, ವಿಶೇಷವಾಗಿ ದಕ್ಷಿಣಕನ್ನಡ ಜಿಲ್ಲೆಯ ಹೆಮ್ಮೆಯ ಪುತ್ರ. ಅಂತಹವರನ್ನೂ ಕರ್ನಾಟಕದ 'ಜಯ ಹೇ ಕರ್ನಾಟಕ ಮಾತೇ ......' ಎಂಬ ನಾಡಗೀತೆಯಲ್ಲಿ ತ್ಯಜಿಸಿರುವುದು ಇಡೀ ದಕ್ಷಿಣಕನ್ನಡ ಜಿಲ್ಲೆಗೇ, ಕನ್ನಡ ನಾಡಿಗೇ ಎಸಗಿದ ಅವಮಾನ! ಆದ್ದರಿಂದ ಆ ಅಪರಾಧವನ್ನು ಸಮಗ್ರ ದಕ್ಷಿಣ ಕನ್ನಡ ಜಿಲ್ಲೆಯ ಜನತೆ, ಕರ್ನಾಟಕದ ಜನತೆ ತೀವ್ರವಾಗಿ ಪ್ರತಿಭಟಿಸಬೇಕು!

—ಶ್ರೀ ಪ್ರಭಂಜನಾಚಾರ್ಯರು

x x x x

## ಒಬ್ಬಿಬ್ಬರೇ ವಿದ್ಯಾರ್ಥಿಗಳಾದರೂ ಅವರಿಗೆ ಪಾಠಪ್ರವಚನ ನಡೆಸಲೇಬೇಕು

"ಭೂಮಿಯಲ್ಲಿ ಸಜ್ಜನರೇ ಇಲ್ಲ. ಆದ್ದರಿಂದ ತತ್ವಜ್ಞಾನದ ಉಪದೇಶಕ್ಕಾಗಿ ಅಲ್ಲಿಗೆ ಹೋಗುವ ಆವಶ್ಯಕತೆ ಇಲ್ಲ. ಇಲ್ಲೇ ನಿಮ್ಮ ಸೇವೆ ಮಾಡಿಕೊಂಡಿರುವೆನು" —ಎಂದು ಶ್ರೀಮದಾಚಾರ್ಯರು ಬದರಿಯ ನಾರಾಯಣಾಶ್ರಮದಲ್ಲಿ ಶ್ರೀ

ನಾರಾಯಣನ ಎದುರು ನಿವೇದಿಸಿಕೊಂಡಾಗ —"ಈಗಲೂ ಕೆಲವರಾದರೂ ಸಜ್ಜನರು ಇದ್ದಾರೆ; ಅವರ ಉದ್ಧಾರಕ್ಕಾಗಿ ಅಲ್ಲಿಗೆ ಹೋಗಿ ತತ್ತ್ವಪ್ರಚಾರ ನಡೆಸಬೇಕು" —ಎಂದು ಶ್ರೀಮನ್ನಾರಾಯಣನು ಆದೇಶಿಸುವನು.

ಸಜ್ಜನರ ಉದ್ಧಾರಕ್ಕಾಗಿಯೇ ಅವತರಿಸಿರುವ ಶ್ರೀ ಮಧ್ವರದ್ದು ಇದೊಂದು ನಾಟಕ. ಈ ಕಾಲದಲ್ಲಿ ಪಾಠಪ್ರವಚನದಲ್ಲಿ ಪಾಲ್ಗೊಳ್ಳುವ ಜಿಜ್ಞಾಸುಗಳೇ ಇಲ್ಲ; ಆದ್ದರಿಂದ ನಾವು ಪಾಠಪ್ರವಚನ ಮಾಡುವುದಿಲ್ಲ—ಎಂದು ವಾದಿಸುವವರಿಗೆ ಪಾಠ ಕಲಿಸುವುದೇ ಈ ನಾಟಕದ ಉದ್ದೇಶ. ಜಿಜ್ಞಾಸುಗಳು ಹೆಚ್ಚಿನ ಸಂಖ್ಯೆಯಲ್ಲಿ ಇಲ್ಲದಿದ್ದರೂ ಕೆಲವರಾದರೂ ಇರುವರು ತಾನೇ? ಅವರಿಗಾದರೂ ಪಾಠ ಪ್ರವಚನವನ್ನು ನಡೆಸಲೇಬೇಕು ದೊಡ್ಡ ದೊಡ್ಡ ವಿಶ್ವವಿದ್ಯಾಲಯಗಳಲ್ಲೂ ಕೆಲವು ತರಗತಿಗಳಲ್ಲಿ ಒಬ್ಬಿಬ್ಬರೇ ವಿದ್ಯಾರ್ಥಿಗಳೂ ಇರುವುದುಂಟು. ಅದರಂತೆ ಒಬ್ಬಿಬ್ಬರೇ ವಿದ್ಯಾರ್ಥಿಗಳಾದರೂ ಅವರಿಗಾಗಿ ಪಾಠಪ್ರವಚನವನ್ನು ನಡೆಸಲೇಬೇಕು. ವೇದಾಂತದ ಪ್ರಚಾರವನ್ನು ನಡೆಸಲೇಬೇಕು.

ಶ್ರೀ ಮಧ್ವರಿಗೆ ಶ್ರೀಮನ್ನಾರಾಯಣ ನೀಡಿದ ಸಂದೇಶದಿಂದ ಈ ಅಭಿಪ್ರಾಯವು ಧ್ವನಿಸುವುದು. ಈ ಬಗೆಯ ಸೂಚ್ಯ ಸಂದೇಶ ನಾರಾಯಣನಿಂದ ದೊರಕುವಂತಾಗಲೆಂದೇ ಶ್ರೀ ಮಧ್ವರು ಅದಕ್ಕೆ ಅವಕಾಶವನ್ನು ಕಲ್ಪಿಸಿಕೊಡಲು ತಾವು ವೇದಾಂತ ಪ್ರಚಾರ ಮಾಡುವುದಿಲ್ಲ ಎಂಬ ವಾದವನ್ನು ಪೂರ್ವಪಕ್ಷವಾಗಿ ಪ್ರಸ್ತಾಪಿಸಿರುವರಷ್ಟೇ.

—ಶ್ರೀ ಪ್ರಭಂಜನಾಚಾರ್ಯರು

x x x x

## ಶಾಸ್ತ್ರದ ಅವಗಾಹನೆ ಮತ್ತು ಪರಿಶುದ್ಧಿ

ಆಚಾರ್ಯರು ದಿಗ್ವಿಜಯ ನಡೆಸುತ್ತಿದ್ದಾಗ ಅಲ್ಲಲ್ಲಿ ಗಂಗೆ ಮುಂತಾದ ತೀರ್ಥಗಳಲ್ಲಿ ಮುಳುಗಿ ಅವುಗಳನ್ನು ಶುದ್ಧಗೊಳಿಸುತ್ತಿದ್ದಂತೆ, ತೀರ್ಥ ಎನಿಸುವ ಶಾಸ್ತ್ರವನ್ನೂ ಶುದ್ಧಗೊಳಿಸುತ್ತಿದ್ದರು. ಅದಕ್ಕಾಗಿ ಅವರು ಶಾಸ್ತ್ರದಲ್ಲಿ ನಡೆಸುತ್ತಿದ್ದ ಅವಗಾಹನ ಎಂದರೆ ಶಾಸ್ತ್ರವಿಷಯಕವಾದ ಮನನನಿದಿಧ್ಯಾಸನಗಳು. ಅದರಿಂದಾಗಿ ಶಾಸ್ತ್ರಗಳಿಗೆ ತಲುಪಿಸುತ್ತಿದ್ದ ಪರಿಶುದ್ಧಿ ಎಂದರೆ ಶಾಸ್ತ್ರ ಪ್ರಕ್ಷೇಪ ಅಪಪಾಠಾದಿಗಳಿಂದ ಕಲುಷಿತವಾಗದಂತೆ ಮಾಡುವುದು.

—ಶ್ರೀ ಪ್ರಭಂಜನಾಚಾರ್ಯರು

x x x x

## ಮಕ್ಕಳಿಗೆ ಅಕ್ಷರಾಭ್ಯಾಸ ಪಾಜಕಕ್ಷೇತ್ರದಲ್ಲಿ

ವಿದ್ಯಾಭಿಮಾನಿನಿ ಭಾರತಿಯ ಪತಿಯಾದ ಶ್ರೀ ಮಧ್ವಾಚಾರ್ಯರು ಅಕ್ಷರಾಭ್ಯಾಸ ನಡೆಸಿದ ಶಿಲೆ ಪಾಜಕದಲ್ಲಿ ಇನ್ನೂ ವಿರಾಜಿಸುತ್ತಿದೆ.

ಸಾಧಕರು ತಮ್ಮ ಮಕ್ಕಳಿಗೆ ಅದರ ಸನ್ನಿಧಾನದಲ್ಲಿ ಅಕ್ಷರಾಭ್ಯಾಸವನ್ನು ನಡೆಸುವುದರ ಮೂಲಕ ಆ ಮಕ್ಕಳಲ್ಲಿ ಭಾರತೀಪತಿಯ ವಿಶೇಷಾನುಗ್ರಹ ದೊರಕುವಂತೆ ಮಾಡಬಹುದಾಗಿದೆ. ನಾಳೆ ಅದು ಅಕ್ಷರತತ್ವದ ಅಧ್ಯಯನಕ್ಕೆ ಬೇಕಾದ ಯೋಗ್ಯತೆಗೂ ಕಾರಣವಾದೀತು.

—ಶ್ರೀ ಪ್ರಭಂಜನಾಚಾರ್ಯರು

x x x x

## 'ಕಾಪುಮಠ' ಮಠದ ವಾತಾವರಣದಿಂದ ತುಂಬಿಕೊಳ್ಳಲಿ!

ತ್ರಿವಿಕ್ರಮಪಂಡಿತರ ಮನೆ 'ಕಾಪುಮಠ' ಎಂದೇ ಎನಿಸುವಷ್ಟು ಮಠದ ವಾತಾವರಣ ಅಲ್ಲಿ ತುಂಬಿತ್ತು. ಪಾಠಪ್ರವಚನ, ಗ್ರಂಥರಚನೆ ಮುಂತಾದವು ವಿಶೇಷವಾಗಿ ನಡೆಯುತ್ತಿತ್ತು. ಈಗ ಸಾಂಕೇತಿಕವಾಗಿಯಷ್ಟೇ 'ಕಾಪು ಮಠ' ಎಂದು ಕರೆಸಿಕೊಳ್ಳುವ ಅಲ್ಲಿ ಮನೆಯ ವಾತಾವರಣವೇ ತುಂಬಿದ್ದು, ಪುನಃ ಅದ ಅನ್ವರ್ಥಕವಾಗಿಯೇ 'ಕಾಪುಮಠ' ಎನಿಸುವಷ್ಟು ಮಠದ ವಾತಾವರಣದಿಂದ ತುಂಬಿಕೊಳ್ಳುವಂತಾಗಬೇಕು.

—ಶ್ರೀ ಪ್ರಭಂಜನಾಚಾರ್ಯರು

x x x x

## ಬಹಿರಂಗ ಸಭೆಗಳಲ್ಲೂ ಉಪನಿಷದಾದಿಗಳ ಪ್ರವಚನ ಅನುಚಿತವಲ್ಲ

"ಸ್ತ್ರೀಶೂದ್ರಬ್ರಹ್ಮಬಂಧೂನಾಂ ತ್ರಯೀ ನ ಶ್ರುತಿಗೋಚರಾ" —ಸ್ತ್ರೀ ಶೂದ್ರಾದಿಗಳು ವೇದದ ಶ್ರವಣಾದಿಗಳನ್ನು ನಡೆಸಬಾರದೆಂದು ವಿಧಿ ಇದೆ. ಹೀಗಿರುವಾಗ ಅಂತಹ ಸ್ತ್ರೀಶೂದ್ರಾದಿಗಳು ಸೇರಿರುವ ಸಭೆಗಳಲ್ಲಿ ವೇದದ ಉಪನಿಷತ್ತುಗಳ ಸಂದೇಶಗಳನ್ನು ಕುರಿತು ಪ್ರವಚನ ಮಾಡಬಹುದೇ?

ಇದಕ್ಕೆ ಅಯೋಗ್ಯರೆದುರು ತತ್ತ್ವೋಪದೇಶ ಮಾಡಬಹುದೆ? ಎಂಬ ಸಂದೇಹಕ್ಕೆ ನೀಡಿದ ಸಮಾಧಾನದಿಂದಲೇ ಪರಿಹಾರ ದೊರಕಿದಂತಾಗಿದೆ.

ಉಪದೇಶ ರೂಪದಿಂದ ಅಯೋಗ್ಯರೆದುರು ತತ್ತ್ವವನ್ನು ಪ್ರಕಟಿಸಬಾರದೆಂದು ನಿಷೇಧಿಸುವ ಪ್ರಕಾಶಸಂಹಿತಾ (ಗೀ. ತಾ. 3-30) ಸಭಾರೂಪೇಣ ವಾ

ಬ್ರೂಯಾತ್..." —ಎಂದು ಸಭೆಯಲ್ಲಿ ಅಯೋಗ್ಯರಂತೆ ಯೋಗ್ಯರೂ ಸೇರಿರುವುದರಿಂದ ಯೋಗ್ಯರನ್ನು ದೃಷ್ಟಿಯಲ್ಲಿಟ್ಟುಕೊಂಡು ಅಯೋಗ್ಯರೆದುರೂ ತತ್ವವನ್ನು ಉಪದೇಶಿಸಬಹುದು—ಎಂದು ತಿಳಿಸಿದೆ.

ಸ್ತ್ರೀಶೂದ್ರಾದಿಗಳು ಸೇರಿರುವ ಸಭೆಗಳಲ್ಲಿ ವೇದಸಂದೇಶದ ಪ್ರಕಟಣೆಯ ವಿಷಯದಲ್ಲಿಯೂ ಈ ನಿಯಮವನ್ನು ಅನ್ವಯಿಸಿಕೊಳ್ಳಬಹುದಾಗಿದೆ ಅಂದರೆ ಸಭೆಯಲ್ಲಿ ಅಧಿಕಾರಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ವೇದಸಂದೇಶಗಳನ್ನು ಉಪದೇಶಿಸಬಹುದು—ಎಂದು.

ಹೀಗೆ ಪ್ರಕಾಶಸಂಹಿತೆಯ ಮೂಲಕ ಗೀತಾತಾತ್ಪರ್ಯದಲ್ಲಿ ಸೂಚ್ಯವಾಗಿ ಸಂದೇಶ ನೀಡಿರುವ ಶ್ರೀಮದಾಚಾರ್ಯರು ಕಣ್ವತೀರ್ಥದಲ್ಲಿ ಈ ಸಂದೇಶವನ್ನು ಪ್ರಾಯೋಗಿಕವಾಗಿ ಪ್ರಕಟಿಸಿರುವರು. ಸೂರ್ಯಗ್ರಹಣದ ಸಂದರ್ಭದಲ್ಲಿ ಸಮುದ್ರದ ದಡದಲ್ಲಿ ಸ್ತ್ರೀಶೂದ್ರಾದಿಗಳೆಲ್ಲ ಸೇರಿದ್ದಾಗ ಐತರೇಯ ಶಾಖೆಯ ಸೂಕ್ತಗಳನ್ನು ಪ್ರವಚನ ಮಾಡಿರುವರು. ಇದರಿಂದ ಬಹಿರಂಗ ಸಭೆಗಳಲ್ಲಿ ಅಧಿಕಾರಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ವೇದಾದಿಗಳ ಸಂದೇಶಗಳನ್ನೂ ಉಪದೇಶಿಸಬಹುದೆಂಬುದನ್ನು ಸ್ಪಷ್ಟೀಕರಿಸಿದಂತಾಗಿದೆ.

—ಶ್ರೀ ಸಗ್ರಿ ರಾಘವೇಂದ್ರ ಉಪಾಧ್ಯಾಯರು

x x x x

## ಪ್ರಾಯೋಗಿಕವಾದ ಸುಮಧ್ವವಿಜಯದ ಪಾಠ

ಸುಮಧ್ವವಿಜಯದಲ್ಲಿ ಉಲ್ಲೇಖಿಸಲಾದ ಘಟನೆಗಳು ಎಲ್ಲೆಲ್ಲಿ ನಡೆದಿರುವವೋ ಆಯಾ ಸ್ಥಳಕ್ಕೇ ಹೋಗಿ, ಆ ಘಟನೆಗಳ ಕುರಿತು ನಡೆಸುವ ಪಾಠ ಒಂದು ರೀತಿಯಲ್ಲಿ "ಪ್ರಾಯೋಗಿಕವಾದ ಸುಮಧ್ವವಿಜಯದ ಪಾಠ" —ಎನಿಸುವುದು. ಎಲ್ಲೆಲ್ಲೋ ಇದ್ದುಕೊಂಡು ನಡೆಸುವ ಪಾಠಕ್ಕಿಂತ ಇದು ಹೆಚ್ಚು ಪ್ರಭಾವಕಾರಿ. ಬರೇ ನಿರೂಪಣೆಯ ಪಾಠಕ್ಕಿಂತ; ಪ್ರಯೋಗಸಹಿತವಾದ ಪಾಠ ಹೇಗೋ ಹಾಗೆ.

—ಶ್ರೀ ವಿಶ್ವೇಶತೀರ್ಥರು

x x x x

## ತಾಯಿಯಂತೆ ಸ್ನಾನ ಮಾಡಲೂ ತಿಳಿಸಿಕೊಟ್ಟವರು

ತಾಯಿಯಾದವಳು ಏನೂ ಅರಿಯದ ಮಗುವಿಗೆ ಸ್ನಾನ ಮಾಡಲೂ ಹೇಳಿಕೊಡುವುದಿದೆ. ಅಂತೆಯೇ ಶ್ರೀಮದಾಚಾರ್ಯರೂ ತಮ್ಮ 'ಸದಾಚಾರಸ್ಮೃತಿ'ಯಲ್ಲಿ ಪುಣ್ಯ ಸಂಪಾದಕವಾಗುವಂತೆ, ಅಂತಃಕರಣದ ಶುದ್ಧಿಗೆ ಪ್ರಯೋಜಕವೆನಿಸುವಂತೆ ಹೇಗೆ ಸ್ನಾನ ಮಾಡಬೇಕೆಂದೂ ನಮಗೆ ತಿಳಿಸಿಕೊಟ್ಟಿರುವರು.

'ಸ್ನಾನಂ ಕುರ್ಯಾದ್ ವಿಧಾನತಃ ...' ವಿಧಿವತ್ತಾಗಿ ಸ್ನಾನಮಾಡಬೇಕೆಂದು ತಿಳಿಸಿ, ಹೇಗೆ ನಡೆಸಿದರೆ ಸ್ನಾನ ವಿಧಿವತ್ತಾಗುವುದೆಂಬುದನ್ನು ಮುಂದೆ ವಿವರಿಸಿರುವರು.

-ಶ್ರೀ ಪ್ರಭಂಜನಾಚಾರ್ಯರು

x x x x

## ಪರೀಕ್ಷೆಗೇ ಹೋಗದಂತೆ

ಪರೀಕ್ಷೆಯ ಸಿದ್ಧತೆಯಾಗಿ ಸ್ನಾನ, ಉಪಹಾರ—ಮುಂತಾದ ಎಲ್ಲ ಚಟುವಟಿಕೆಗಳನ್ನು ಪೂರೈಸಿ, ಪರೀಕ್ಷೆಗೇ ಹೋಗದಿದ್ದರೆ ಹೇಗನಿಸುವುದು? ಹಾಗೆಯೇ ದೇಹದ ಪೋಷಣೆಗೆ ಬೇಕಾದ ಭೋಜನಾದಿಗಳನ್ನೆಲ್ಲ ನಿರ್ವಹಿಸಿ, ಅಂತಹ ದೇಹ ಯಾವ ಪುರುಷಾರ್ಥದ ಸಾಧನೆಗಾಗಿ ಅನುಗ್ರಹೀತವಾಗಿದೆಯೋ ಅಂತಹ ಪರಮ ಪುರುಷಾರ್ಥವಾದ ಮೋಕ್ಷದ ಗಳಿಕೆಗೆ ಅದನ್ನು ಬಳಸಿಕೊಳ್ಳದಿದ್ದಲ್ಲಿ ಅದೇ ಬಗೆಯ ಮೂರ್ಖತನ ಎನಿಸುವುದು!

-ಶ್ರೀ ಪ್ರಭಂಜನಾಚಾರ್ಯರು

x x x x

## ಕ್ರಿಯಾ ಸಮರ್ಪಣೆಯ ರಹಸ್ಯ

ಶ್ರೀಮದಾಚಾರ್ಯರು 'ಕರ್ಮಯೋಗ' [ಭಾಗ. ತಾ. ನಿ. 10-3-37]ದ ಮೂಲಕ ಕರ್ಮವು ಬಂಧಕವಾಗದೆ ಮೋಚಕವಾಗಬೇಕೆಂದರೆ ಆಯಾ ಕರ್ಮದ ಸ್ವತಂತ್ರಕರ್ತೃ ಭಗವಂತನೆಂದೂ, ಅವನ ಆರಾಧನಾ ರೂಪದಿಂದ ಆ ಕರ್ಮ ಆಚರಿಸಲ್ಪಡುತ್ತಿದೆ ಎಂದೂ ಅನುಸಂಧಾನಕ್ಕೆ ತಂದುಕೊಳ್ಳಬೇಕೆಂದು ಸಂದೇಶಿಸಿರುವರು—ಸರ್ವಕ್ರಿಯಾಸು ಕರ್ತೃತ್ವಭೋಕ್ತೃತ್ವೇನ ಜನಾರ್ದನಮ್ । ಯೋ ವೇತ್ತಿ ನೈತಿ ಸಂಸಾರಂ ತತ್ಪ್ರಸಾದಾನ್ನ ಸಂಶಯಃ".

ಬಂಧಕವೆನಿಸುವ ಕರ್ಮ ಮೋಚಕವಾಗಬೇಕಾದರೆ ಆ ಕರ್ಮವನ್ನು ಭಗವಂತನಿಗೆ ಸಮರ್ಪಿಸಬೇಕೆಂದು ಹೇಳಲಾದ ಇಲ್ಲಿ ಭಗವಂತನಿಗೆ ಕರ್ಮವನ್ನು ಹೇಗೆ ಸಮರ್ಪಿಸಬೇಕೆಂಬ ರಹಸ್ಯವನ್ನೂ ತಿಳಿಸಿದಂತಾಗಿದೆ. 'ನಾಹಂ ಕರ್ತಾ ಹರಿಃ ಕರ್ತಾ ...' —ಎಂದಿರುವಂತೆ ಆಯಾ ಕರ್ಮಕ್ಕೆ ಸ್ವತಂತ್ರಕರ್ತೃ ಶ್ರೀ ಹರಿಯೇ; '... ತತ್ಪೂಜಾ ಕರ್ಮ ಚಾಖಿಲಮ್' —ಎಂದಿರುವಂತೆ ಆಯಾ ಕರ್ಮ ಅವನ ಪೂಜಾರೂಪದಿಂದ ಅವನ ಪ್ರೀತಿಗಾಗಿಯೇ ನಡೆಸಲ್ಪಟ್ಟದೆಂದು ಅನುಸಂಧಾನವನ್ನು ತಂದುಕೊಳ್ಳುವುದರಿಂದಲೇ ಆಯಾ ಕರ್ಮವನ್ನು ಭಗವಂತನಿಗೆ ಸಮರ್ಪಿಸಿದಂತಾಗುವುದು.

ಪ್ರಕೃತ ಯಾತ್ರೆಯೂ ಭಗವಂತನಿಗೆ ಸಮರ್ಪಿತವಾಗಬೇಕಿದ್ದರೆ ಅದರ

ಸ್ವತಂತ್ರಕರ್ತೃ ಅವನೇ. ಅವನನ್ನು ಸಂತೋಷಪಡಿಸುವುದೇ ಈ ಯಾತ್ರೆಯ ಮುಖ್ಯ ಉದ್ದೇಶ ಎಂಬ ಅನುಸಂಧಾನವನ್ನು ತಂದುಕೊಳ್ಳಬೇಕು.

—ಶ್ರೀ ಸಗ್ರಿ ರಾಘವೇಂದ್ರ ಉಪಾಧ್ಯಾಯರು

x x x x

**'ಹರಿಚಿತ್ತ ಸತ್ಯ' ಸಂದೇಶದ ಮನವರಿಕೆ**

ಯಾತ್ರೆಯ ಹಂತ ಹಂತದಲ್ಲಿ ಎಡವುತ್ತಿರುವ ನಮ್ಮ ಯಾತ್ರೆಯ ನಿರ್ವಹಣೆಯಲ್ಲಿ ನಾವು ಎಷ್ಟು ಅಸ್ವತಂತ್ರರು; ಅಸಮರ್ಥರು—ಎಂದು ಅನುಭವಿಸುವುದಕ್ಕೆ ಅವಕಾಶ ದೊರಕಿ 'ಹರಿಚಿತ್ತ ಸತ್ಯ ನರಚಿತ್ತಕ್ಕೆ ಬಂದದ್ದು ಎಳ್ಳಷ್ಟು ನಡೆಯದು'—ಎಂಬ ದಾಸರ ಸಂದೇಶವನ್ನು ಮನವರಿಕೆ ಮಾಡಿಕೊಳ್ಳುವಂತಾಗಿದೆ.

—ಶ್ರೀ ಸಗ್ರಿ ರಾಘವೇಂದ್ರ ಉಪಾಧ್ಯಾಯರು

x x x x

**ಪುಣ್ಯದ ಸಂರಕ್ಷಣೆಯ ಉಪಾಯ**

ಸಂಪಾದಿಸಿದ ಹಣವನ್ನು ನಮ್ಮ ಕೈಯಲ್ಲಿಯೇ ಹಿಡಿದುಕೊಂಡಿದ್ದರೆ ಕಳ್ಳಕಾಕರ ಭಯಕ್ಕೆ ಅವಕಾಶವಿದೆ. ಆದರೆ ಅದೇ ಹಣವನ್ನು ಬ್ಯಾಂಕಲ್ಲಿ ಇಟ್ಟುಬಿಟ್ಟರೆ ನಿಶ್ಚಿಂತರಾಗಿ ಇರಬಹುದು. ಅಂತೆಯೇ ಯಾತ್ರೆಯಲ್ಲಿ ಸಂಪಾದಿಸಿದ ಪುಣ್ಯವನ್ನು 'ಶ್ರೀ ಕೃಷ್ಣಾರ್ಪಣಮಸ್ತು' —ಎಂದು ಭಗವಂತನಲ್ಲಿ ಸಮರ್ಪಿಸಿಬಿಟ್ಟರೆ, ಆ ಪುಣ್ಯವನ್ನು ಕಳೆದುಕೊಳ್ಳುವ ಭಯವಿಲ್ಲ.

—ಶ್ರೀ ಪ್ರಭಂಜನಾಚಾರ್ಯರು

x x x x

## ಆಶಯ :

**ಗಾರ್ಹಸ್ಥ್ಯದ ಹಿರಿಮೆ**

ಆಶ್ರಮಗಳಲ್ಲಿ ಬ್ರಹ್ಮಚರ್ಯ ಮೊದಲನೆಯದ್ದು. ಅಲ್ಲದೆ, ಉಳಿದ ಆಶ್ರಮದವರೂ ಪಾಲಿಸಬೇಕಾದದ್ದು. ಇಂತಹ ಹಿರಿಮೆ ಬ್ರಹ್ಮಚರ್ಯದಲ್ಲಿ ಇರುವುದಾದರೂ ಉಳಿದೆಲ್ಲ ಆಶ್ರಮದವರಿಗೆ ಆಸರೆ ನೀಡುವ ಹಿರಿಮೆ ಗಾರ್ಹಸ್ಥ್ಯದಲ್ಲಿ ಇದೆ. ಗಾರ್ಹಸ್ಥ್ಯದ ಈ ಹಿರಿಮೆಯನ್ನು ಗುರುತಿಸಿಯೇ ಶ್ರೀಮದಾಚಾರ್ಯರು ಯಮಕಭಾರತದ ಮೊದಲ ಪದ್ಯದಲ್ಲಿ 'ದಂಪತ್ಯಾದ್ಯಾದ್ಯಾಶ್ರಮ್ಯೈಃ'—ಎಂದು ಗೃಹಸ್ಥಾಶ್ರಮವನ್ನೇ ಮೊದಲು ಉಲ್ಲೇಖಿಸಿರುವರು.

—ಶ್ರೀ ವಿದ್ಯಾಧೀಶತೀರ್ಥರು

x x x x

## 'ದೇವಕ್ಯಂತೇ' ಪದದಿಂದ ಹೊರಡುವ ಅರ್ಥಗಳು

ಯಮಕಭಾರತದ ಶ್ರೀಕೃಷ್ಣನ ಅವತಾರವನ್ನು ತಿಳಿಸುವ ಪದ್ಯದಲ್ಲಿ 'ದೇವಕ್ಯಂತೇ'–ಎಂಬ ಶಬ್ದ ದೇವಕಿಯ ಸಮೀಪದಲ್ಲಿ ಎಂಬುದಾಗಿ ಕೃಷ್ಣಾವತಾರದ ಸ್ಥಳವನ್ನು ತಿಳಿಸುವಂತೆ, ಕೃಷ್ಣಾವತಾರದ ಕಾಲ ಹಾಗೂ ಉದ್ದೇಶಗಳನ್ನೂ ಸೂಚಿಸಿಕೊಡಬಲ್ಲದು.

ಅಕ್ಷರವಿದ್ಯೆಯಲ್ಲಿ ಚತುರನಾದ ಶಕುನಿ ದೇವಕ. ಅಂತಹ ಶಕುನಿ ದ್ವಾಪರ ಯುಗಕ್ಕೆ ಅಭಿಮಾನಿಯಾಗಿರುವುದರಿಂದ 'ದೇವಕ್ಯಂತೇ' – ಎಂಬುದರಿಂದ ದ್ವಾಪರಯುಗದ ಕೊನೆಯಲ್ಲಿ ಎಂಬ ಅರ್ಥ ಹೊರಡುವುದು.

ಹಾಗೆಯೇ ದೇವಕ ಎನಿಸುವ ಶಕುನಿಯು ಸಂಬಂಧಿಗಳಾದ ದುರ್ಯೋಧನಾದಿಗಳ ಅಂತ್ಯಕ್ಕಾಗಿ, ಸಂಹಾರಕ್ಕಾಗಿ–ಎಂಬ ಆಶಯವೂ 'ದೇವಕ್ಯಂತೇ'–ಎಂಬ ಶಬ್ದದಿಂದ ಹೊರಡಬಲ್ಲದು. 'ಕೌರವಾಣಾಂ ವಿನಾಶಾಯ....'ಅಲ್ಲವೇ ಅವನು ಅವತರಿಸಿದ್ದು ?

—ಶ್ರೀ ವಿದ್ಯಾಧೀಶತೀರ್ಥರು

x x x x

## ಆನಂದತೀರ್ಥಪರಾನಂದವರದ

ಭಗವಂತನಿಗೆ ನೀಡಿದ 'ಆನಂದತೀರ್ಥಪರಾನಂದವರದ' ಎಂಬ ಸಂಬೋಧನೆಗೆ ಆನಂದತೀರ್ಥರಿಗೆ ಶ್ರೇಷ್ಠ ಆನಂದದ ವರವನ್ನು ಅನುಗ್ರಹಿಸುವವನೆಂಬ ಅರ್ಥ ಹೇಗೋ ಹಾಗೆಯೇ ಆನಂದತೀರ್ಥರ ಪರರಾದವರಿಗೆ ಅಂದರೆ ಆನಂದತೀರ್ಥರ ಭಕ್ತರಿಗೆ ಆನಂದದ ವರವನ್ನು ಕರುಣಿಸುವವನೆಂಬ ಮತ್ತೊಂದು ಅರ್ಥವೂ ಅಭಿಪ್ರೇತವಾದದ್ದು.

—ಶ್ರೀ ಪ್ರಭಂಜನಾಚಾರ್ಯರು

x x x x

## ಎತ್ತಿನ ಬಾಲ ಹಿಡಿದುದರ ಸಾಂಕೇತಿಕ ಸಂದೇಶ

ಎತ್ತಿನ ಬಾಲ ಹಿಡಿದುಕೊಂಡು ಅರಣ್ಯವನ್ನೆಲ್ಲ ಅನಾಯಾಸವಾಗಿ ಸುತ್ತಾಡಿಕೊಂಡು ಬಂದ ಬಾಲಕ ವಾಸುದೇವನು ಎತ್ತು ಸಂಕೇತಿಸುವ ಧರ್ಮದ ಬಾಲವನ್ನು ಹಿಡಿದುಕೊಂಡರೆ ಸಂಸಾರ—ಅರಣ್ಯದಿಂದ ಅನಾಯಾಸವಾಗಿ ಪಾರಾಗಬಹುದೆಂದು ಸೂಚಿಸಿರುವನು.

—ಶ್ರೀ ಪ್ರಭಂಜನಾಚಾರ್ಯರು

x x x x

## ಋಣಗಳನ್ನು ತೀರಿಸದೆ ಭೋಜನಕ್ಕೆ ಹಕ್ಕಿಲ್ಲ

ವಾಸುದೇವನು ಮಧ್ಯಗೇಹ ಭಟ್ಟರನ್ನು ಊಟಕ್ಕೆ ಕರೆದಾಗ ಅವರು ತಮ್ಮ ಎದುರಲ್ಲಿರುವ ವ್ಯಕ್ತಿಯಲ್ಲಿ ತಾವು ಮಾಡಿದ ಸಾಲವನ್ನು ತೀರಿಸದೆ ಊಟ ಮಾಡುವುದಿಲ್ಲ ಎಂದರು.

ಪ್ರತಿಯೊಬ್ಬನೂ ಸಂಸಾರದಲ್ಲಿ ಜನ್ಮ ಪಡೆಯುವಾಗ ದೇವಋಣ, ಪಿತೃಋಣ, ಋಷಿಋಣ, ಮನುಷ್ಯಋಣ ಹಾಗೂ ಭೂತಋಣ—ಎಂಬುದಾಗಿ ಐದು ಬಗೆಯ ಸಾಲಕ್ಕೆ ಒಳಗಾಗಿರುತ್ತಾನೆ. ಇವನ್ನು ಸ್ವಲ್ಪಮಟ್ಟಿಗಾದರೂ ತೀರಿಸದಿದ್ದರೆ ಅವನಿಗೆ ಊಟ ಮಾಡುವ ಹಕ್ಕಿಲ್ಲ—ಎಂಬ ಧ್ವನಿ ಇದರಿಂದ ಹೊರಡುವುದು.

**—ಶ್ರೀ ಪ್ರಭಂಜನಾಚಾರ್ಯರು**

x x x x

## ಮೂರು ರುದ್ರಪ್ರತೀಕಗಳ ಸಂದರ್ಶನದ ಔಚಿತ್ಯ

ಶ್ರವಣ, ಮನನ ಹಾಗೂ ನಿದಿಧ್ಯಾಸನಗಳೆಂಬುದು ಮಹತ್ತ್ವಪೂರ್ಣಗಳಾದ ಆಧ್ಯಾತ್ಮಿಕ ಸಾಧನೆಗಳು. ಈ ಮೂರರಕ್ಕೂ ಮನಸ್ಸಿನ ಪೂರ್ಣ ಸಹಕಾರ ಬೇಕು. ಅದಕ್ಕಾಗಿ ಈ ಮೂರು ಸಾಧನೆಗಳನ್ನು ನಡೆಸುವಾಗಲೂ ಮನೋನಿಯಾಮಕ ರುದ್ರನನ್ನು ನೆನೆಯುತ್ತಿರಬೇಕು. ಇದನ್ನು ಸೂಚಿಸುವುದಕ್ಕಾಗಿಯೇ ವಾಸುದೇವ ಕೊಡವೂರಿನ ಶಂಕರನಾರಾಯಣ, ಬನ್ನಂಜೆಯ ಮಹಾಲಿಂಗೇಶ್ವರ, ಉಡುಪಿಯ ಚಂದ್ರಮೌಳೀಶ್ವರ—ಈ ಮೂರು ಪ್ರತೀಕಗಳಲ್ಲಿ ಮೂರು ಬಾರಿ ರುದ್ರನ ಸಂದರ್ಶನವನ್ನು ಪಡೆದಿದ್ದನು.

**—ಶ್ರೀ ಪ್ರಭಂಜನಾಚಾರ್ಯರು**

x x x x

## ಆಥರ್ವಣೋಪನಿಷತ್ತಿನ ಸಂದೇಶದ ಪ್ರತಿಪಾದನೆ

'ದ್ವಾ ಸುಪರ್ಣಾ ಸಯುಜಾ ಸಖಾಯಾ....' —ಎಂಬ ಆಥರ್ವಣೋಪನಿಷತ್ತು ದೇವರು ಸರ್ವದಾ ನಮ್ಮ ಜೊತೆಗೇ ಇರುವ ಗೆಳೆಯ ಎಂದು ಸಂದೇಶಿಸಿದೆ.

ಮಧ್ಯಗೇಹ ಭಟ್ಟರು ತಪ್ಪಿಸಿಕೊಂಡು ಉಡುಪಿಗೆ ಹೋಗಿದ್ದ ವಾಸುದೇವನನ್ನು 'ನೀನೊಬ್ಬನೇ ಉಡುಪಿಗೆ ಹೇಗೆ ಬಂದಿ?' ಎಂದು ಕೇಳಿದಾಗ, ಅವನು ಆಥರ್ವಣೋಪನಿಷತ್ತಿನ ಸಂದೇಶವನ್ನೇ ತನ್ನ ಬಾಲಭಾಷೆಯಲ್ಲಿ ತಿಳಿಸಿದ್ದಾನೆ.

**—ಶ್ರೀ ಪ್ರಭಂಜನಾಚಾರ್ಯರು**

x x x x

## ವಾಸುದೇವನ ಅನ್ಯಮನಸ್ಕತೆ

ತೋಟಂತಿಲ್ಲಾಯರು ಪಾಠ ಹೇಳುತ್ತಿದ್ದಾಗ ವಾಸುದೇವ ಅನ್ಯಮನಸ್ಕನಾಗಿದ್ದನೆಂದು ಸುಮಧ್ವವಿಜಯದಲ್ಲಿ ಹೇಳಲಾಗಿದೆ. ಇಲ್ಲಿ 'ಅನ್ಯ' ಎಂದರೆ 'ದ್ವಾಸುಪರ್ಣಾ....' ಶ್ರುತಿಯಲ್ಲಿ 'ಅನಶ್ನನ್ನನ್ಯಃ' —ಎಂದು ಜೀವಾತ್ಮನಿಗಿಂತ 'ಅನ್ಯ'ನಾಗಿ ಉಲ್ಲೇಖಿಸಲ್ಪಟ್ಟ ಪರಮಾತ್ಮ ಎಂಬ ಅರ್ಥವೇ ಹೊರತು ಪಠ್ಯದ ಪ್ರಮೇಯಕ್ಕಿಂತ ಬೇರೆಯಾದ ಯಾವುದೋ ಲೌಕಿಕವಿಷಯ ಎಂಬ ಅರ್ಥವಲ್ಲ. 'ನ ವೈ ಕ್ವಚಿನ್ಮೇ ಮನಸೋ ಮೃಷಾ ಗತಿಃ'—ನನ್ನ ಮನಸ್ಸು ಎಂದೂ ಭಗವಂತನಿಗಿಂತ ಬೇರೆಯದ್ದನ್ನು ವ್ಯರ್ಥವಾಗಿ ಚಿಂತಿಸುವುದೇ ಇಲ್ಲ—ಎಂದು ಹೇಳಿಕೊಂಡಿರುವ ಚತುರ್ಮುಖನ ಪದವಿಗೆ ಬರಲಿರುವ ವಾಯುದೇವನ ಅವತಾರವಾದ ವಾಸುದೇವನ ಮನಸ್ಸು ಭಗವಂತನನ್ನು ಬಿಟ್ಟು ಬೇರೆಡೆ ಹೇಗೆ ಹೋದೀತು ?

—ಶ್ರೀ ಪ್ರಭಂಜನಾಚಾರ್ಯರು

x x x x

## ಆಧ್ಯಾತ್ಮದಲ್ಲಿ ಅಭಿರುಚಿ ಹುಟ್ಟಿಸುವುದಕ್ಕಾಗಿ ಪವಾಡಗಳ ಪ್ರದರ್ಶನ

ಉಪನಿಷತ್ತೇ ಮುಂತಾದ ಶಾಸ್ತ್ರಗ್ರಂಥಗಳಲ್ಲೂ ಫಲಶ್ರುತಿಯಲ್ಲಿ ಐಹಿಕ ಫಲಗಳನ್ನೇ ತಿಳಿಸುವುದಿದೆ. ಆ ಫಲದ ಬಯಕೆಯಿಂದಾದರೂ ಶಾಸ್ತ್ರದಲ್ಲಿ ತೊಡಗುವಂತಾಗಲಿ—ಎಂಬ ಉದ್ದೇಶದಿಂದಲೇ ಹೊರತು ಆ ಫಲಪ್ರಾಪ್ತಿಯೇ ಉದ್ದೇಶವಾಗಲಿ ಎಂಬ ದೃಷ್ಟಿಯಿಂದಲ್ಲ. 'ರೋಚನಾರ್ಥಾ ಫಲಶ್ರುತಿಃ' ಅಭಿರುಚಿಯನ್ನು ಹುಟ್ಟಿಸುವುದಕ್ಕಾಗಿಯಷ್ಟೇ ಐಹಿಕ ಫಲಗಳನ್ನು ಉಲ್ಲೇಖಿಸುವುದು.

ಅಂತೆಯೇ ಆಚಾರ್ಯರು ಬಂಡೆಯನ್ನು ಎತ್ತುವುದೇ ಮುಂತಾದ ಪವಾಡಗಳನ್ನು ತೋರಿಸಿರುವುದು ಆ ಮೂಲಕ ಆಕರ್ಷಿಸಿ ಸಾತ್ವಿಕರನ್ನು ಅಧ್ಯಾತ್ಮದಲ್ಲಿ ಅಭಿರುಚಿಯನ್ನು ಹುಟ್ಟಿಸುವುದಕ್ಕಾಗಿ ಹೊರತು ಪವಾಡಗಳ ಪ್ರದರ್ಶನದಿಂದ ತಾನು ಮೆರೆಯಬೇಕೆಂದಲ್ಲ.

—ಶ್ರೀ ಪ್ರಭಂಜನಾಚಾರ್ಯರು

x x x x

## ಗುರುಗಳ ಮೂಲಕ ಪಡೆದ ಜ್ಞಾನಕ್ಕೆ ಬೆಲೆ

ಎಷ್ಟೇ ದೊಡ್ಡ ವ್ಯಕ್ತಿಯಾಗಿದ್ದಿರಲಿ, ಅವನು ಗುರುಗಳ ಮೂಲಕ ಜ್ಞಾನೋಪದೇಶವನ್ನು ಪಡೆಯಲೇ ಬೇಕು. ಹೀಗೆ ಗುರುಗಳ ಮೂಲಕ ಪಡೆದ ಜ್ಞಾನಕ್ಕೇ ಬೆಲೆ ಎಂಬುದನ್ನು ಶ್ರೀಮದಾಚಾರ್ಯರು ತೋಟಂತಿಲ್ಲಾಯರಲ್ಲಿ ವಿದ್ಯಾಭ್ಯಾಸ ನಡೆಸಿ ತೋರಿಸಿಕೊಟ್ಟರು. ಶ್ರೀಕೃಷ್ಣ ಸಾಂದೀಪಿನೀ ಆಚಾರ್ಯ

ರಲ್ಲಿ ಕೆಲ ದಿನಗಳಷ್ಟು ಕಾಲ ವಿದ್ಯಾಭ್ಯಾಸ ನಡೆಸಿದ್ದರೆ, ವಾಸುದೇವ ತೋಟಂತಿಲ್ಲಾಯರಲ್ಲಿ ಸುಮಾರು ಮೂರು ತಿಂಗಳ ಕಾಲ ವಿದ್ಯಾಭ್ಯಾಸ ನಡೆಸಿದ್ದರು.

—ಶ್ರೀ ಪ್ರಭಂಜನಾಚಾರ್ಯರು

x x x x

## ವೈಷ್ಣವರು ರುದ್ರವಿರೋಧಿಗಳಲ್ಲ

ಶ್ರೀ ಮಧ್ವರು ಕೊಡವೂರಿನ ಶಂಕರನಾರಾಯಣ ದೇವಾಲಯ ಮುಂತಾದ ಅನೇಕ ರುದ್ರ ದೇವಾಲಯಗಳಿಗೆ ಹೋಗಿದ್ದರು. ತಾವು ವೈಷ್ಣವರಾದರೂ ರುದ್ರದೇವಾಲಯಗಳಿಗೆ ಹೋಗುವುದರ ಮೂಲಕ ತಾವೇನೂ ರುದ್ರವಿರೋಧಿಗಳಲ್ಲ. ರುದ್ರದೇವನಿಗೂ ಮನೋನಿಯಾಮಕನೆಂದು ಗೌರವವನ್ನು ಸಲ್ಲಿಸಿಯೇ ತೀರಬೇಕೆಂದು ತೋರಿಸಿಕೊಟ್ಟಿರುವರು.

—ಶ್ರೀ ಪ್ರಭಂಜನಾಚಾರ್ಯರು

x x x x

## ಬದರಿ ನಾರಾಯಣನಿಂದ ವಾಯುಜೀವೋತ್ತಮತ್ವ ತತ್ವದ ಬಗ್ಗೆ ಮೆಚ್ಚುಗೆ

"ಸರ್ವ ದೇವೋತ್ತಮೋ ವಾಯುರಿತಿ ಜ್ಞಾನಾನ್ನ ಚಾಪರಮ್ ।
ಪ್ರಿಯಮಸ್ತಿ ಹರೇಃ ಕಿಂಚಿತ್ ತಥಾ ವಾಯೋರ್ಹರೇರ್ವಿದಃ ॥"

ಎಂದು 'ಮಾಹಾತ್ಮ್ಯ' ಗ್ರಂಥ ಸಾರುತ್ತಿರುವಂತೆ ವಾಯುದೇವನಿಗೆ ವಿಷ್ಣು ಸರ್ವೋತ್ತಮತ್ವಜ್ಞಾನ ಹೇಗೆ ಪ್ರಿಯವಾದುದೋ ಹಾಗೆಯೇ ಶ್ರೀ ವಿಷ್ಣುವಿಗೆ ವಾಯುಜೀವೋತ್ತಮತ್ವಜ್ಞಾನವು ಅತ್ಯಂತ ಪ್ರಿಯವಾದದು.

ಗೀತಾಭಾಷ್ಯದ ಮಂಗಲ ಪದ್ಯದಲ್ಲಿ 'ಶಕ್ತಿತಃ' ಎಂಬ ಪದದ ಬದಲಿಗೆ 'ಲೇಶತಃ' ಎಂಬ ಪದವನ್ನು ಪ್ರಯೋಗಿಸಬೇಕು ಎಂದು ಆದೇಶಿಸುವುದರ ಮೂಲಕ ಬದರಿನಾರಾಯಣ ವಾಯುಜೀವೋತ್ತಮತ್ವತತ್ವ ತನಗೆ ಅತ್ಯಂತ ಪ್ರಿಯ ಎಂದು ಸೂಚಿಸಿಕೊಟ್ಟಿರುವನು. 'ಶಕ್ತಿತಃ' ಎಂಬ ಪದ ಇದ್ದರೆ, ಶ್ರೀ ಮಧ್ವರಿಗೆ ಗೀತೆಯನ್ನು ತಿಳಿದುಕೊಳ್ಳುವ ಸಾಮರ್ಥ್ಯ ಅಷ್ಟೇ—ಎಂದು ವಾಯುಜೀವೋತ್ತಮತ್ವಕ್ಕೆ ಕುಂದು ಬಂದೀತೆಂದು ಅದನ್ನು 'ಲೇಶತಃ' ಎಂದು ಬದಲಾಯಿಸಲು ತಿಳಿಸಿದ್ದು. 'ಲೇಶತಃ' ಎಂಬ ಶಬ್ದದಿಂದ ಶ್ರೀ ಮಧ್ವರು ಗೀತಾಭಾಷ್ಯದಲ್ಲಿ ತಿಳಿಸಿದಷ್ಟೇ ಅವರಿಗೆ ಗೀತೆ ಅರ್ಥವಾಗಿರುವುದಲ್ಲ; ಅವರಿಗೆ ತಿಳಿದಿರುವ ಒಂದಂಶವನ್ನಷ್ಟೇ ಗೀತಾಭಾಷ್ಯದಲ್ಲಿ ತಿಳಿಸಿದ್ದಾರೆ; ಅವರಿಗೆ ಇದಕ್ಕಿಂತಲೂ ಹತ್ತಾರುಪಟ್ಟು ತಿಳಿದಿದೆ ಎಂಬ ಅಭಿಪ್ರಾಯ ಹೊರಡುವ ಮೂಲಕ ವಾಯುಜೀವೋತ್ತಮತ್ವಕ್ಕೆ ಪುಷ್ಟಿ ನೀಡಿದಂತಾಗುವುದು.

—ಶ್ರೀ ಪ್ರಭಂಜನಾಚಾರ್ಯರು

x x x x

## ಮಹತ್ತ್ವದ ಸಂದೇಶದ ಪ್ರಕಟಣೆಯ ಉದ್ದೇಶ

ಅಡೂರಿನ ಮಹಾಲಿಂಗೇಶ್ವರ ದೇವಾಲಯದಲ್ಲಿ ವಿದ್ವಾಂಸರು ಐತರೇಯದ ಸೂಕ್ತವೊಂದರ ಅರ್ಥವನ್ನು ಕೇಳಿದಾಗ ಶ್ರೀಮದಾಚಾರ್ಯರು ಆ ವಿದ್ವಾಂಸರು ತಿಳಿದಿದ್ದ ಅರ್ಥಕ್ಕಿಂತ ಬೇರೆಯೇ ಅರ್ಥವನ್ನು ಹೇಳಿದ್ದು ಆ ಅರ್ಥವನ್ನು ತಿಳಿಯದೆ ಅಲ್ಲ. ಮತ್ತೆ ಬೇರೆಯೇ ಅರ್ಥವನ್ನು ಹೇಳಿದ್ದಲ್ಲಿ ಆ ವಿದ್ವಾಂಸರಿಂದ ಅದರ ಬಗ್ಗೆ ಬರಬಹುದಾದ ಆಕ್ಷೇಪವನ್ನು ಪರಿಹರಿಸುತ್ತ ವೇದಕ್ಕೆ ಕನಿಷ್ಠ ಮೂರು ಅರ್ಥಗಳು, ಮಹಾಭಾರತಕ್ಕೆ ಕನಿಷ್ಠ ಹತ್ತು ಅರ್ಥಗಳು ಹಾಗೂ ವಿಷ್ಣುಸಹಸ್ರನಾಮಗಳಿಗೆ ಕನಿಷ್ಠ ನೂರು ನೂರು ಅರ್ಥಗಳು—ಎಂಬ ಮಹತ್ತ್ವದ ಸಂದೇಶವನ್ನು ಪ್ರಕಟಪಡಿಸಬೇಕೆಂಬುದಕ್ಕಾಗಿಯೇ. ಆ ಸೂಕ್ತಕ್ಕೆ ಅವರು ತಿಳಿದಿದ್ದ ಅರ್ಥವನ್ನೇ ಹೇಳಿದ್ದಲ್ಲಿ ಈ ಸಂದೇಶದ ಪ್ರಕಟಣೆಗೆ ಅವಕಾಶ ದೊರಕುತ್ತಿದ್ದಿಲ್ಲ ತಾನೇ ?

—ಶ್ರೀ ಪ್ರಭಂಜನಾಚಾರ್ಯರು

x x x x

## ಮಲ್ಲವಿದ್ಯೆಯ ಕೌಶಲದ ಪ್ರದರ್ಶನದ ರಹಸ್ಯ

ಆಚಾರ್ಯರದ್ದು ಪರಿಪೂರ್ಣ ವ್ಯಕ್ತಿತ್ವ. ಜ್ಞಾನದಲ್ಲಿಯೂ ಪೂರ್ಣ; ಅಷ್ಟೇ ಬಲದಲ್ಲಿಯೂ ಪೂರ್ಣ. ತಾವು ಬಲದಲ್ಲಿ ಪರಿಪೂರ್ಣರೆಂಬುದನ್ನು ಸಾತ್ವಿಕರಿಗೆ ತೋರಿಸಿಕೊಡಬೇಕಾಗಿದೆ. ಮಲ್ಲರ ಜೊತೆಗೆ ಕಾದಾಡುವಂತಹದ್ದು ಸಂನ್ಯಾಸ ಧರ್ಮಕ್ಕೆ ವಿರುದ್ಧ. ಆದ್ದರಿಂದ ಮಲ್ಲರು ತಮ್ಮ ವಿಷಯದಲ್ಲಿ ಏನು ಬೇಕಾದರೂ ಮಾಡಲಿ. ಅವರು ನಡೆಸಿದ ಯಾವುದೇ ಚಟುವಟಿಕೆಯಲ್ಲಾದರೂ ಸೋತರೆ ಮಲ್ಲವಿದ್ಯೆಯಲ್ಲಿ ಸೋತಂತೆಯೇ—ಎಂಬ ಕರಾರನ್ನು ಹಾಕಲಾಯಿತು. ಆ ಕರಾರಿಗೆ ಅನುಗುಣವಾಗಿ ಶ್ರೀ ಮಧ್ವರ ಕುತ್ತಿಗೆಯನ್ನು ಹಿಚುಕಿದರು; ಬೆರಳನ್ನು ಎತ್ತಲು ತೊಡಗಿದರು, ರೋಮವನ್ನು ಕಿತ್ತಲು ಪ್ರಾರಂಭಿಸಿದರು; ಮೂಗಿಗೆ ಗುದ್ದಲು ಉಪಕ್ರಮಿಸಿದರು—ಆದರೆ ಯಾವುದರಲ್ಲೂ ಆಚಾರ್ಯರನ್ನು ಸೋಲಿಸಲು ಆಗಲಿಲ್ಲ, ಹೀಗೆ ಮಲ್ಲವಿದ್ಯೆಯಲ್ಲಿ ತಮ್ಮ ಕೌಶಲವನ್ನು ಆಚಾರ್ಯರು ಸಂನ್ಯಾಸ ಧರ್ಮಕ್ಕೆ ವಿರೋಧ ಬರದಂತೆ ಪರೋಕ್ಷವಾಗಿ ಪ್ರಕಟಿಸಿರುವರು.

—ಶ್ರೀ ಪ್ರಭಂಜನಾಚಾರ್ಯರು

x x x x

## ತಾನು ಹಿಂದೆ ಭೀಮಸೇನನಾಗಿದ್ದುದರ ಸಮರ್ಥನೆ

ಕುರುಕ್ಷೇತ್ರದಲ್ಲಿ ಒಂದೆಡೆ ಅಗೆಯಲು ಹೇಳಿ ಅಲ್ಲಿದ್ದ ದೊಡ್ಡ ಗದೆಯನ್ನು

ತೋರಿಸಿ ತಾನು ಹಿಂದೆ ಭೀಮಸೇನನಾಗಿದ್ದೆ ಎಂದು ಒಮ್ಮೆ ತೋರಿಸಿದ್ದ ಶ್ರೀಮದಾಚಾರ್ಯರು ಐವತ್ತು ಟನ್ ಭಾರದ ಬಂಡೆಯನ್ನು ಒಂದು ಕೈಯಲ್ಲಿ ಎತ್ತಿ ಭದ್ರಾನದಿಯ ದಡದಲ್ಲಿ ಇಡುವುದರ ಮೂಲಕ ತಾವು ಹಿಂದೆ ಭೀಮಸೇನ ರಾಗಿದ್ದವರೆಂಬುದನ್ನು ಮತ್ತೊಮ್ಮೆ ಸಮರ್ಥಿಸಿದಂತಾಗಿತ್ತು.

—ಶ್ರೀ ಪ್ರಭಂಜನಾಚಾರ್ಯರು

x x x x

## ಪಾಂಡಿತ್ಯದ ಜೊತೆಗೆ ಅಹಂಕಾರ ಸಲ್ಲ

ಬೆಳೆಯ ಜೊತೆಗೆ ಕಳೆಯಂತೆ ಪಾಂಡಿತ್ಯದ ಜೊತೆಗೆ ಅಹಂಕಾರ ಉಂಟಾಗುವ ಅಪಾಯವಿದೆ. ಪಾಂಡಿತ್ಯ ಜಿಜ್ಞಾಸೆಯ ಜೊತೆಗೆ ಇರಬೇಕಾದದ್ದೇ ಹೊರತು ಅಹಂಕಾರದ ಜೊತೆಗೆ ಅಲ್ಲ.

ಉಜಿರೆಯ ಗರ್ವಿಷ್ಠ ವಿದ್ವಾಂಸರನ್ನು ಸೋಲಿಸಿದ ಶ್ರೀಮದಾಚಾರ್ಯರು ಆ ಮೂಲಕ ಈ ಸಂದೇಶವನ್ನು ಸೂಚಿಸಿರುವರು.

—ಶ್ರೀ ಪ್ರಭಂಜನಾಚಾರ್ಯರು

x x x x

## ಆಚಾರ್ಯರನ್ನು ಮನೆಗೆ ಆಹ್ವಾನಿಸಲು ಬೇಕಾದ ಅರ್ಹತೆ

ಜಯಸಿಂಹರಾಜ ಶ್ರೀಮದಾಚಾರ್ಯರನ್ನು ತಮ್ಮಲ್ಲಿಗೆ ಬರಲು ಆಹ್ವಾನಿಸಿದನು. ಆಚಾರ್ಯರನ್ನು ಆಹ್ವಾನಿಸಲು ಅವನಲ್ಲಿದ್ದ ಅರ್ಹತೆ ಎಂದರೆ ಆಚಾರ್ಯರ ಮೂಲರೂಪದ ಸಹಧರ್ಮಿಣಿ ಅವನ ಅರಮನೆಯಲ್ಲಿಯೇ ಇದ್ದಳೆಂಬುದು. ಅರ್ಥಾತ್ ಅಪಹೃತವಾಗಿದ್ದ ಸರ್ವಮೂಲ ಗ್ರಂಥಗಳು ಅವನಲ್ಲಿದ್ದುದರಿಂದ, ಅವುಗಳಲ್ಲಿ ಸನ್ನಿಹಿತಳಾದ ಭಾರತೀದೇವಿ ಅವನ ಅರಮನೆಯಲ್ಲಿ ಇದ್ದಂತೆಯೇ.

ನಾವೂ ಶ್ರೀಮದಾಚಾರ್ಯರು ನಮ್ಮ ಮನೆಗೆ ಬರಬೇಕೆಂದರೆ ಜಯಸಿಂಹರಾಜ ಮಾಡಿದಂತೆ ಅವರ ಮೂಲರೂಪದ ಸಹಧರ್ಮಿಣಿ ನಮ್ಮ ಮನೆಯಲ್ಲಿ ಇರುವಂತೆ ಮಾಡಬೇಕು. ಸರ್ವಮೂಲ ಗ್ರಂಥಗಳನ್ನು ಮನೆಯಲ್ಲಿ ಇಟ್ಟುಕೊಂಡವೆಂದರೆ ಆ ಗ್ರಂಥಗಳ ಮೂಲಕ ಭಾರತಿದೇವಿ ನಮ್ಮ ಮನೆಯಲ್ಲಿ ಇದ್ದಂತೆಯೇ. ಭಾರತೀದೇವಿ ಮನೆಯಲ್ಲಿ ಇದ್ದಾಳೆಂದರೆ, 'ನಿಮ್ಮ ಸಹಧರ್ಮಿಣಿ ಈಗಾಗಲೇ ನಮ್ಮ ಮನೆಯಲ್ಲಿ ನೆಲೆಸಿದ್ದಾಳೆ. ನೀವೂ ಬರಬೇಕು' ಎಂದು ಆಹ್ವಾನಿಸಿದರೆ ಶ್ರೀಮದಾಚಾರ್ಯರು ಅವಶ್ಯವಾಗಿ ನಮ್ಮ ಮನೆಗೆ ಬರುವರು.

—ಶ್ರೀ ಪ್ರಭಂಜನಾಚಾರ್ಯರು

x x x x

## ಮಧ್ವರಿರುವಲ್ಲಿ ಶ್ರೀಕೃಷ್ಣ

ಉಡುಪಿಯಲ್ಲಿ ಶ್ರೀ ಮಧ್ವಾಚಾರ್ಯರು ಇರುವರೆಂದು ಶ್ರೀಕೃಷ್ಣ ದ್ವಾರಕೆಯಿಂದ ಉಡುಪಿಯ ಕಡೆಗೆ ಬಂದನು. ಅಂತಹ ಕೃಷ್ಣ ನಮ್ಮಲ್ಲಿಗೆ ಬರುವಂತೆ ಮಾಡಬೇಕೆಂದರೆ ಮೊದಲು ಶ್ರೀ ಮಧ್ವರು ನಮ್ಮಲ್ಲಿ ನೆಲೆಸುವಂತೆ ಮಾಡಬೇಕು.

—ಶ್ರೀ ಪ್ರಭಂಜನಾಚಾರ್ಯರು

x x x x

## ಆಭಾಸಕೋಽಸ್ಯ ಪವನಃ

ಭಗವಂತನು ರಾಮಾವತಾರದಲ್ಲಿ ಸಮುದ್ರವನ್ನು ಬಂಧಿಸಿದ್ದನು. 'ಆಭಾಸಕೋಽಸ್ಯ ಪವನಃ....' ಎಂದಿರುವಂತೆ ಭಗವಂತನ ಸಾಕ್ಷಾತ್ ಪ್ರತಿಬಿಂಬರಾದ ವಾಯುದೇವರು ತಮ್ಮ ಮಧ್ವರೂಪದಲ್ಲಿ ಸಮುದ್ರವನ್ನು ನಿಶ್ಚಲವನ್ನಾಗಿ ಮಾಡಿ, ತಾವು ಭಗವಂತನ ಸಾಕ್ಷಾತ್ ಪ್ರತಿಬಿಂಬ ಎಂಬುದನ್ನು ತೋರಿಸಿಕೊಟ್ಟಿರುವರು.

—ಶ್ರೀ ಪ್ರಭಂಜನಾಚಾರ್ಯರು

x x x x

## ವಾಯುದೇವನ ಅವತಾರ ಎಂಬುದಕ್ಕೆ ಸೂಚನೆ

ಮೋಡಗಳನ್ನು ಕಲೆಹಾಕಿ ಮಳೆ ಬರಿಸುವುದು ಗಾಳಿಯ ಕೆಲಸ. ಶ್ರೀ ಮಧ್ವರು ಎರ್ಕಿ ಮಠದಲ್ಲಿ ಮೋಡಗಳನ್ನು ತರಿಸಿ, ಮಳೆ ಸುರಿಸುವುದರ ಮೂಲಕ ತಾವು ವಾಯುದೇವರ ಅವತಾರ ಎಂಬುದನ್ನು ಸೂಚಿಸಿಕೊಟ್ಟಿರುವರು.

—ಸಗ್ರಿ ರಾಘವೇಂದ್ರ ಉಪಾಧ್ಯಾಯರು

x x x x

## ಚಾತುರ್ವರ್ಣ್ಯದ ವಿಷಯದಲ್ಲಿ ಶ್ರೀ ಮಧ್ವರ ಸಮನ್ವಯ

ಬ್ರಾಹ್ಮಣಾದಿ ವರ್ಣಗಳೆಲ್ಲ ಕಲ್ಪಿತಗಳೇ ಹೊರತು ವಾಸ್ತವವಾಗಿ ಇಲ್ಲವೇ ಇಲ್ಲ—ಎಂದು ವಾದಿಸುವವರು ಕೆಲವರಾದರೆ, ಮತ್ತೆ ಕೆಲವರು ಪ್ರತಿಯೊಂದು ಸಾಧನೆಗೂ ಅರ್ಹತೆ ಬ್ರಾಹ್ಮಣಾದಿ ವರ್ಣಗಳನ್ನು ಅವಲಂಬಿಸಿಯೇ ಇರುವುದೆಂದ ಹೇಳುವವರು.

ಆಚಾರ್ಯರಾದರೂ ಸ್ವಭಾವಕ್ಕೆ ಸಂಬಂಧಪಡುವ ಸ್ವಾಭಾವಿಕ ವರ್ಣಗಳು, ದೇಹಕ್ಕೆ ಸಂಬಂಧಿಸುವ ಔಪಾಧಿಕ ವರ್ಣಗಳೆಂದು ವರ್ಣಗಳ ವಿಶ್ಲೇಷಣೆ ನಡೆಸಿ, "ಆದರಸ್ತತ್ರ ಕರ್ತವ್ಯಃ ಯತ್ರ ಭಕ್ತಿರ್ಹರೇರ್ವರಾ...." —ಎಂಬುದಾಗಿ ಕೆಲವಡೆ

ಔಪಾಧಿಕ ವರ್ಣಗಿಂತಲೂ ಭಗವದ್ಭಕ್ತಿ ಮುಂತಾದವುಗಳನ್ನೇ ಅರ್ಹತೆಯ ಮಾಪಕಗಳನ್ನಾಗಿ ಗುರುತಿಸಿಕೊಟ್ಟಿರುವರು.

—ಶ್ರೀ ಪ್ರಭಂಜನಾಚಾರ್ಯರು

x x x x

## ಕೃತಿ :

### 'ಸುಮಧ್ವವಿಜಯ' ಆಚಾರ್ಯರ ಚರಿತ್ರೆಯ ಬಗ್ಗೆ ಅಧಿಕೃತ ಗ್ರಂಥ

ಶಂಕರವಿಜಯವೇ ಮುಂತಾದವು ಶಂಕರಾಚಾರ್ಯರು ಕಾಲವಾದ ಎಷ್ಟೋ ವರ್ಷಗಳ ಮೇಲೆ ರಚಿತವಾದವು—ಆದ್ದರಿಂದ ಅವುಗಳಲ್ಲಿ ಕಾಲ್ಪನಿಕ ಅಂಶಗಳ ಪ್ರವೇಶ ಇದ್ದೇ ಇರುವವು. ಸುಮಧ್ವವಿಜಯವಾದರೂ ಆಚಾರ್ಯರ ಸಮಕಾಲದಲ್ಲಿಯೇ ರಚಿತವಾಗಿದ್ದು, ಆಚಾರ್ಯರನ್ನು ಕಂಡವರ, ಅವರ ಸಂಪರ್ಕಕ್ಕೊಳಗಾಗಿದ್ದವರ ಕಾಲದಲ್ಲಿಯೇ ರೂಪುಗೊಂಡ ಅದರಲ್ಲಿ ಅಪ್ರಾಮಾಣಿಕ ಘಟನೆಗಳ ನಿರೂಪಣೆಗೆ ಅವಕಾಶವಿಲ್ಲದುದರಿಂದ ಅದು ಆಚಾರ್ಯರ ಚರಿತ್ರೆಯ ಬಗ್ಗೆ ಅಧಿಕೃತ ಗ್ರಂಥ ಎನಿಸಬಹುದಾಗಿದೆ.

—ಶ್ರೀ ವಿದ್ಯಾಮಾನ್ಯತೀರ್ಥರು

x x x x

### ಸುಮಧ್ವವಿಜಯದ ವೈಶಿಷ್ಟ್ಯ

ಗೃಹಸ್ಥರಾದ ನಾರಾಯಣ ಪಂಡಿತರು ರಚಿಸಿರುವ ಸುಮಧ್ವವಿಜಯ ಸನ್ಯಾಸಿಗಳೂ ನಿತ್ಯ ಪಠಿಸುವ, ಪಠಿಸಬೇಕಾದ ಕೃತಿ ಎನಿಸಿದೆ. ಭಾರತೀದೇವಿ ತಮ್ಮ ಪತಿಯ ಕುರಿತ ಕೃತಿಯಲ್ಲಿ ಅಂತಹ ವೈಶಿಷ್ಟ್ಯ ಸಿದ್ಧಿಸುವಂತೆ, ನಾರಾಯಣ ಪಂಡಿತರಲ್ಲಿದ್ದುಕೊಂಡು ಅವರ ಮೂಲಕ ಈ ಕೃತಿಯನ್ನು ಬರೆಯಿಸಿರುವರು.

—ಶ್ರೀ ಪ್ರಭಂಜನಾಚಾರ್ಯರು

x x x x

### ಸರ್ವಮೂಲದ ಪ್ರತಿಯೊಂದು ಗ್ರಂಥವೂ ಪೂರ್ಣ

'ಸರ್ವಂ ಪೂರ್ಣಮಿಹೋದ್ದಿಷ್ಟಂ....'—ಎಂದಿರುವಂತೆ ಸರ್ವ ಎಂದರೆ ಪೂರ್ಣ ಎಂದರ್ಥ. ಪೂರ್ಣವಾದವುಗಳೆಂಬ ಅರ್ಥದಲ್ಲಿಯೂ ಆಚಾರ್ಯರ ಸರ್ವಮೂಲ ಗ್ರಂಥಗಳು 'ಸರ್ವಮೂಲ' ಎಂಬ ಹೆಸರನ್ನು ಪಡೆದಿವೆ. ಆದ್ದರಿಂದ

ಸರ್ವಮೂಲದ ಯಮಕಭಾರತವೇ ಮುಂತಾದ ಚಿಕ್ಕಪುಟ್ಟ ಗ್ರಂಥವೂ ಸ್ವಯಂ ಪರಿಪೂರ್ಣವಾದದ್ದು.

—ಶ್ರೀ ವಿದ್ಯಾಧೀಶತೀರ್ಥರು

x x x x

## ಯಮನ ಭಯವನ್ನು ಪರಿಹರಿಸುವ ಕೃತಿ

ಆಚಾರ್ಯರ 'ಯಮಕಭಾರತ' ಯಮನ ಭಯವನ್ನು ದೂರಮಾಡಬಲ್ಲ, ಬರೇ ಎಂಭತ್ತೊಂದು ಪದ್ಯಗಳನ್ನೊಳಗೊಂಡ ಮಹತ್ತ್ವದ ಕೃತಿ.

—ಶ್ರೀ ಪ್ರಭಂಜನಾಚಾರ್ಯರು

x x x x

## ಯಮಕಭಾರತ
## ಕೃಷ್ಣನ ಕಥೆಯಾಗಿರುವುದರಿಂದಲೂ 'ಗೋಪ್ಯ'

"....ಗೋಪ್ಯಂ ಭಾರತಸಂಕ್ಷೇಪಮಕೃಥಾ ವಿಶ್ವವಿಸ್ಮಯಮ್" —ಎಂಬುದಾಗಿ ಸುಮಧ್ವವಿಜಯದಲ್ಲಿ ಯಮಕಭಾರತವನ್ನು 'ಗೋಪ್ಯ' ಎಂದು ಕರೆದಿರುವುದು ಎರಡು ಅಭಿಪ್ರಾಯಗಳಲ್ಲಿ. 'ರಹಸ್ಯ' ಎಂಬುದು ಒಂದು ಅಭಿಪ್ರಾಯವಾದರೆ, ಗೋಪ ಎನಿಸುವ ಗೋಪಾಲಕನಾದ ಶ್ರೀಕೃಷ್ಣನಿಗೆ ಸಂಬಂಧಿಸಿದುದು 'ಗೋಪಸ್ಯ ಇದಮ್'—ಎಂಬುದು ಮತ್ತೊಂದು ಅಭಿಪ್ರಾಯ. ಈ ಗ್ರಂಥದ ಉಪಸಂಹಾರದಲ್ಲಿ 'ಕೃಷ್ಣಕಥೇಯಂ ಯಮಿತಾ....' ಎಂದು ಶ್ರೀಮದಾಚಾರ್ಯರೇ ತಿಳಿಸಿರುವರು ತಾನೇ ?

—ಶ್ರೀ ವಿದ್ಯಾಧೀಶತೀರ್ಥರು

x x x x

## ಯಮಕಭಾರತ ಪರಮಾನಂದಕರ

ಯಮಕಭಾರತದ ಮಂಗಲ ಪದ್ಯದ ನಾಲ್ಕೂ ಚರಣಗಳಲ್ಲಿ 'ಪರಮಾನಂದಮ್' —ಎಂಬ ಪದ ಬರುವಂತೆ ಪ್ರಯೋಗಿಸುವುದರ ಮೂಲಕ ಈ ಗ್ರಂಥ ಪರಮಾನಂದಕರವಾದುದೆಂಬ ಸೂಚನೆಯನ್ನು ನೀಡಿದಂತಾಗಿದೆ.

—ಶ್ರೀ ವಿದ್ಯಾಧೀಶತೀರ್ಥರು

x x x x

## ಶ್ರೀಕೃಷ್ಣ ಕಥೆಯ
## ಪ್ರಾರಂಭದ ವೈಶಿಷ್ಟ್ಯ

ಶ್ರೀಕೃಷ್ಣನು ಅವತರಿಸಿದನು ಎಂದು ಸಾಮಾನ್ಯವಾಗಿ ಕೃಷ್ಣನ ಕಥೆಯನ್ನು

ಪ್ರಾರಂಭಿಸುವುದಾದರೆ ಶ್ರೀಮದಾಚಾರ್ಯರು ಯಮಕಭಾರತದಲ್ಲಿ 'ನ ವಾಸುದೇವೋ ಜಃ' ಶ್ರೀಕೃಷ್ಣ ಹುಟ್ಟಿಲ್ಲ ಎನ್ನುತ್ತಲೇ ಕೃಷ್ಣನ ಕಥೆಯನ್ನು ಪ್ರಾರಂಭಿಸುವರು.'

—ಶ್ರೀ ವಿದ್ಯಾಧೀಶತೀರ್ಥರು

x x x x

## ಇನ್ನಾವುದೇ ಸಹಸ್ರನಾಮದಲ್ಲಿ ಇಲ್ಲದ ಹಿರಿಮೆ ಶ್ರೀ ವಿಷ್ಣು ಸಹಸ್ರನಾಮದಲ್ಲಿ

ಬೇರೆ ಬೇರೆ ಸಹಸ್ರನಾಮಗಳಿವೆ. ಆದರೆ ವಿಷ್ಣು ಸಹಸ್ರನಾಮದ ಹಿರಿಮೆ ಗರಿಮೆ ಇನ್ನಾವುದೇ ಸಹಸ್ರನಾಮದಲ್ಲಿ ಕಾಣಸಿಗದು. ಒಂದು ಟನ್ ಚಿನ್ನದ ಗಟ್ಟಿ, ಒಂದು ಟನ್ ಬೆಳ್ಳಿಯ ಗಟ್ಟಿ, ಒಂದು ಟನ್ ಕಬ್ಬಿಣದ ಗಟ್ಟಿ—ಇವುಗಳ ಭಾರ ಸಮಾನವಾದರೂ ಮೌಲ್ಯ ಸಮಾನವಾದೀತೇ ?

—ಶ್ರೀ ಪ್ರಭಂಜನಾಚಾರ್ಯರು

x x x x

## ಶ್ರೀ ವಿಷ್ಣು ಸಹಸ್ರನಾಮಕ್ಕೆ ಬೃಹತೀ ಸಹಸ್ರದ ಮಾಧ್ಯಮದಲ್ಲಿ ಐತರೇಯೋಪನಿಷತ್ತಿನ ಸಂಬಂಧ

ಐತರೇಯೋಪನಿಷತ್ತಿನ ಸೂಕ್ತವೊಂದಕ್ಕೆ ಅರ್ಥ ಹೇಳುತ್ತ ಶ್ರೀಮದಾಚಾರ್ಯರು ವಿಷ್ಣು ಸಹಸ್ರನಾಮದ ಪ್ರಸ್ತಾವವನ್ನು ಬಲಾತ್ಕಾರವಾಗಿ ತಂದರೆಂದು ಭಾವಿಸಬಾರದು.

ವಿಷ್ಣು ಸಹಸ್ರನಾಮ ಯಾವ ಬೃಹತೀ ಸಹಸ್ರದ ವ್ಯಾಖ್ಯೆಯ ಎನಿಸಿದೆಯೋ, ಅಂತಹ ಬೃಹತೀ ಸಹಸ್ರದ ಪ್ರಸ್ತಾವ ಅಧಿಕವಾಗಿ ಐತರೇಯೋಪನಿಷತ್ತಿನಲ್ಲಿ ಬಂದಿದೆ. ಹೀಗೆ ಬೃಹತೀ ಸಹಸ್ರದ ಮಾಧ್ಯಮದಲ್ಲಿ ಐತರೇಯೋಪನಿಷತ್ತಿಗೂ ವಿಷ್ಣು ಸಹಸ್ರನಾಮಕ್ಕೂ ಸಂಬಂಧ ಇದ್ದೇ ಇದೆ.

—ಶ್ರೀ ಪ್ರಭಂಜನಾಚಾರ್ಯರು

x x x x

## ಕೃಷ್ಣಾಮೃತ ಮಹಾರ್ಣವದಲ್ಲಿ ಭವರೋಗದ ಪರಿಹಾರಕ್ಕೆ ಬೇಕಾದ ಔಷಧಗಳು

ಭವರೋಗದ ಉಪಶಮನಕ್ಕೆ ಬೇಕಾದ ದಿವ್ಯಗಳಾದ ಔಷಧಗಳನ್ನು ಕೊಕ್ಕಡದ ವೈದ್ಯನಾಥನ ಸನ್ನಿಧಾನದಲ್ಲಿ ರೂಪುಗೊಂಡ ಶ್ರೀಕೃಷ್ಣಾಮೃತ

ಮಹಾರ್ಣವದ ಮೂಲಕ ಪಡೆದುಕೊಳ್ಳಬಹುದಾಗಿದೆ.

—ಶ್ರೀ ಪ್ರಭಂಜನಾಚಾರ್ಯರು

x x x x

## ಮೂಲಕಾರರ ಅನುಮತಿ ಪಡೆದು ರಚಿಸಲಾದ ಭಾಷ್ಯ

ಮೂಲಕ್ಕೆ ಅನುಗುಣವಾಗಿ ಭಾಷ್ಯ ಬರೆಯಬೇಕೆಂಬುದು ಸಾಮಾನ್ಯವಾದ ನಿಯಮ. ಆದರೆ ಶ್ರೀಮದಾಚಾರ್ಯರು ಮೂಲಕ್ಕೆ ಅನುಗುಣವಾಗಿ ಮಾತ್ರ ವಲ್ಲ; ಮೂಲಕಾರರಾದ ಶ್ರೀವೇದವ್ಯಾಸರನ್ನು ಭೆಟ್ಟಿಯಾಗಿ ಅವರ ಅನುಮತಿ ಯನ್ನು ಪಡೆದೇ ಬ್ರಹ್ಮಸೂತ್ರಕ್ಕೆ ಭಾಷ್ಯವನ್ನು ರಚಿಸಿರುವರು.

ಹೀಗೆ ಮೂಲಕಾರರ ಅನುಮತಿ ಪಡೆದೇ ರಚಿತವಾಗಿರುವ ಭಾಷ್ಯ ಎಂಬು ದಾಗಿ ಶ್ರೀ ಮಧ್ವರ ಬ್ರಹ್ಮಸೂತ್ರ ಭಾಷ್ಯಕ್ಕೆ ಆ ಪ್ರಯುಕ್ತ ವೈಶಿಷ್ಟ್ಯ.

—ಶ್ರೀ ಪ್ರಭಂಜನಾಚಾರ್ಯರು

x x x x

## ಆಂತರಿಕ ಮೌಲ್ಯದಿಂದ ದೊಡ್ಡತನ

'ಚಕ್‌ಲೀಪ್' ಎಷ್ಟು ದೊಡ್ಡದಿರುವುದು ? ಅದರಲ್ಲಿ ಬರವಣಿಗೆಯಾದರೂ ಎಷ್ಟು ಪ್ರಮಾಣದಲ್ಲಿರುವುದು? ಹೀಗಿದ್ದರೂ ಅದು ಲಕ್ಷಗಟ್ಟಲೆ ರೂ. ಬೆಲೆ ಬಾಳುವಂತಹದ್ದಾಗಿದ್ದಿರಬಹುದು. ಅಂತೆಯೇ ಆಚಾರ್ಯರ ಗ್ರಂಥಗಳು, ಅವು ಗಳಲ್ಲಿರುವ ಮಾತು ಅತಿ ಸಂಕ್ಷೇಪದಲ್ಲಿ ಇರುವವಾದರೂ ಅವುಗಳ ಆಂತರಿಕ ಮೌಲ್ಯ ಬಹಳಷ್ಟಿರುವುದು.

—ಶ್ರೀ ಪ್ರಭಂಜನಾಚಾರ್ಯರು

x x x x

## ವೈಷ್ಣವಾಗ್ರೇಸರನ ಸನ್ನಿಧಿಯಲ್ಲಿ ಶ್ರೀ ವಿಷ್ಣುಸಹಸ್ರನಾಮದ ಗಾಂಭೀರ್ಯದ ಪ್ರಕಟಣೆ

ಶ್ರೀ ವಿಷ್ಣುಸಹಸ್ರನಾಮದ ವೈಭವ ಶ್ರೀಮದಾಚಾರ್ಯರ ಮೂಲಕ ಅಭಿ ವ್ಯಕ್ತವಾದದ್ದು ಅಡೂರಿನ ಮಹಾಲಿಂಗೇಶ್ವರ ಎನಿಸುವ ರುದ್ರನ ದೇವಾಲಯದಲ್ಲಿ. "ವೈಷ್ಣವಾನಾಂ ಯಥಾ ಶಂಭುಃ" ಎಂದಿರುವಂತೆ ರುದ್ರದೇವ ವೈಷ್ಣವಾಗ್ರೇಸರ ನಾದುದರಿಂದಲೇ ತನ್ನ ಸನ್ನಿಧಾನದಲ್ಲಿಯೇ ಶ್ರೀ ವಿಷ್ಣುವಿನ ಪಾರಮ್ಯವನ್ನು

ಸಾರುವ ವಿಷ್ಣು ಸಹಸ್ರನಾಮದ ಗಾಂಭೀರ್ಯ ಪ್ರಕಟವಾಗುವಂತೆ ಮಾಡಿದನು.

—ಶ್ರೀ ಪ್ರಭಂಜನಾಚಾರ್ಯರು

x x x x

## ಷೋಡಶ ಕಲೆಗಳ ಪ್ರಭಾವವನ್ನು ಕುಗ್ಗಿಸುವ ಷೋಡಶ ಸರ್ಗಗಳ ಗ್ರಂಥ

ಹದಿನಾರು ಸರ್ಗಗಳುಳ್ಳ, ಸಾವಿರದ ಒಂದು ಶ್ಲೋಕಗಳನ್ನೊಳ ಗೊಂಡಿರುವ ಸುಮಧ್ವವಿಜಯ ಷೋಡಶ ಕಲೆಗಳ ಪುರುಷನ ಮೇಲೆ ಷೋಡಶ ಕಲೆಗಳ ಪ್ರಭಾವ ಕಡಿಮೆಯಾಗುವಂತೆ ಮಾಡಬಲ್ಲದು.

—ಶ್ರೀ ಪ್ರಭಂಜನಾಚಾರ್ಯರು

x x x x

## ವೈಭವವನ್ನು ಹೆಚ್ಚಿಸಿದ ತಿದ್ದುಪಡಿ

ಸಾಮಾನ್ಯವಾಗಿ ಪುಸ್ತಕವಲ್ಲಿ ಏನನ್ನಾದರೂ 'ರೀರೈಟ್' ಮಾಡಲಾಯಿ ತೆಂದರೆ ಅದು ಆ ಪುಸ್ತಕದ ಪಾಲಿಗೆ ನ್ಯೂನತೆ ಎನಿಸುವುದು ಆದರೆ ಶ್ರೀಮದಾ ಚಾರ್ಯರ 'ಗೀತಾಭಾಷ್ಯದಲ್ಲಿ 'ಶಕ್ತಿತಃ' —ಎಂಬ ಪದದ ಬದಲು 'ಲೇಶತಃ' ಎಂಬುದಾಗಿ ಪ್ರಯೋಗಿಸಬೇಕೆಂದು ಬದರಿನಾರಾಯಣನ ಅಜ್ಞಾನುಸಾರವಾಗಿ ನಡೆಸಲಾದ 'ರೀರೈಟ್' ಆ ಗ್ರಂಥದ ವೈಭವವನ್ನು ಇನ್ನಷ್ಟು ಹೆಚ್ಚಿಸಿದೆ.

—ಶ್ರೀ ಪ್ರಭಂಜನಾಚಾರ್ಯರು

x x x x

## ಶ್ರೀ ಕೃಷ್ಣಾಮೃತ ಮಹಾರ್ಣವದ ರಚನೆಗೆ ಇಡೇಪಾಡಿತ್ತಾಯ ನೆಪ ಮಾತ್ರ

'ಶ್ರೀ ಕೃಷ್ಣಾಮೃತ ಮಹಾರ್ಣವ' 'ಇಡೇಪಾಡಿತ್ತಾಯ' ಎಂಬ ಒಬ್ಬ ಭಕ್ತನ ಉದ್ಧಾರಕ್ಕಾಗಿಯಷ್ಟೇ ರೂಪುಗೊಂಡದ್ದಲ್ಲ. ಹೇಗೆ ಭಗವದ್ಗೀತೆ ಅರ್ಜುನನನ್ನು ನಿಮಿತ್ತನನ್ನಾಗಿಟ್ಟುಕೊಂಡು ಸಕಲ ಸಜ್ಜನರ ಒಳಿತಿಗಾಗಿ ಉಪ ದೇಶಿಸಲ್ಪಟ್ಟಿದೆಯೋ ಹಾಗೆಯೇ ಕೃಷ್ಣಾಮೃತ ಮಹಾರ್ಣವವೂ. ತಮ್ಮ ಭಕ್ತರೆನಿ ಸುವ ಸಕಲ ಸಾತ್ವಿಕರೂ ಮೋಕ್ಷಸುಖರೂಪವಾದ ಸಂಪತ್ತನ್ನು ಹೊಂದುವಂತಾಗಲಿ "ಸ್ವಭಕ್ತಭೂತ್ಯೈ" —ಎಂದು ರಚಿತವಾದದ್ದು ಕೃಷ್ಣಾಮೃತ ಮಹಾರ್ಣವ.

—ಶ್ರೀ ಪ್ರಭಂಜನಾಚಾರ್ಯರು

x x x x

## ಭಾಗವತ ಸಂಪ್ರದಾಯದ ಸಾತ್ವಿಕರನ್ನು ತಿದ್ದುವುದಕ್ಕಾಗಿ ಶ್ರೀ ಕೃಷ್ಣಾಮೃತ ಮಹಾರ್ಣವ

ಭಾಗವತ ಸಂಪ್ರದಾಯದಲ್ಲಿ ತಾರತಮ್ಯವಿಲ್ಲದೆ ಎಲ್ಲ ದೇವತೆಗಳನ್ನು ಸಮಾನವಾಗಿ ಪೂಜಿಸಲಾಗುವುದು; ಗೋಪೀಧಾರಣೆಗೆ ಅಷ್ಟೊಂದು ಪ್ರಾಶಸ್ತ್ಯ ವಿಲ್ಲ; ಏಕಾದಶೀ ವ್ರತಾಚರಣೆಯಲ್ಲಿ ಭರ ಇಲ್ಲ. ಅಂಗಾರಧಾರಣೆಗೆ ಅವಕಾಶ ವಿಲ್ಲ—ಹೀಗೆ ಶಾಸ್ತ್ರೀಯವಾಗಿ ಅನೇಕ ನ್ಯೂನತೆಗೊಳಗಾಗಿರುವ ಭಾಗವತ ಸಂಪ್ರದಾಯದಿಂದ ಇಡೇಪಾಡಿತ್ತಾಯ ಮುಂತಾದ ಸಾತ್ವಿಕರು ವೈಷ್ಣವಸಂಪ್ರ ದಾಯಕ್ಕೆ ತಿರುಗುವಂತೆ ನಿರ್ಮಿಸಿ, ಅನುಗ್ರಹಿಸಲಾದ ಶ್ರೀಕೃಷ್ಣಾಮೃತಮಹಾ ರ್ಣವದಲ್ಲಿ ಗೋಪಿಚಂದನ ಧಾರಣೆಗೆ, ಅಂಗಾರ ಧಾರಣೆಗೆ, ಸಾಲಿಗ್ರಾಮದ ಅರ್ಚನೆಗೆ, ಏಕಾದಶೀವ್ರತಾಚರಣೆಗೆ ಒತ್ತು ಕೊಟ್ಟಿರುವಂತೆ ಪೂಜೆಯಲ್ಲಿ ತಾರ ತಮ್ಯದ ಅನುಸಂಧಾನಕ್ಕೂ ಪ್ರಾಶಸ್ತ್ಯವನ್ನು ತೋರಿಸಲಾಗಿದೆ.

—ಶ್ರೀ ವಿದ್ಯಾಧೀಶತೀರ್ಥರು

x x x x

## ಭಗವಂತನ ಆಯುಧಗಳು ಪ್ರಲಯದಲ್ಲಿಯೂ ಇರುವವು

ಪರಮಾತ್ಮ ಸರ್ವದಾ ತನ್ನ ಆಯುಧಗಳಾದ ಶಂಖ ಚಕ್ರ ಗದಾ ಪದ್ಮ ಗಳನ್ನು ಧರಿಸಿಕೊಂಡಿರುವವನು. ಎಲ್ಲವೂ ನಾಶ ಹೊಂದಿರುವ ಪ್ರಲಯ ಕಾಲ ದಲ್ಲಿಯೂ ಅವನ ಆಯುಧಗಳು ಇದ್ದೇ ಇರುವವು. ಆದ್ದರಿಂದ ಅವು ಪ್ರಾಕೃತ ಆಯುಧಗಳಾಗಿರಲಿಕ್ಕೆ ಸಾಧ್ಯವಿಲ್ಲ. ಪ್ರಲಯದಲ್ಲಿಯೂ ಇರುವ ದುರ್ಗಾದೇವಿಯೇ ಅವನ ಚಕ್ರ. ವಾಯುದೇವ ಅರ್ಥಾತ್ ಮುಕ್ತ ಚತುರ್ಮುಖನೇ ಅವನ ಗದೆ. ಇದೊಂದು ಅವನ ವೈಭವ. ಆದ್ದರಿಂದಲೇ ಶ್ರೀಮದಾಚಾರ್ಯರು ಯಮಕ ಭಾರತದ ಎರಡನೇ ಪದ್ಯದಲ್ಲಿ ಇದನ್ನೇ ಉಲ್ಲೇಖಿಸಿರುವರು—"ಯಸ್ಯ ಕರಾಳೋ- ಳಂ ಚಕ್ರಃ ಕಾಳಃ ಪರಃ ಸ ಹಿ ಕರಾಳೋऽಳಮ್ । ಯಸ್ಯ ಗದಾ ಪವಮಾನಃ...."

—ಶ್ರೀ ವಿದ್ಯಾಧೀಶತೀರ್ಥರು

x x x x

## ಸರ್ವಮೂಲದ ಪ್ರತಿಯೊಂದು ಗ್ರಂಥವೂ ಆಯಾ ಪ್ರಮೇಯಗಳಿಗೆ ಮೂಲ

ಶ್ರೀಮದಾಚಾರ್ಯರ ಸರ್ವಮೂಲದ ಪ್ರತಿಯೊಂದು ಚಿಕ್ಕ ಪುಟ್ಟ ಗ್ರಂಥವೂ ಆಯಾ ಗ್ರಂಥದ ಸರ್ವಪ್ರಮೇಯಗಳಿಗೂ ಮೂಲ ಎನಿಸಿರುತ್ತದೆ.

ಸದಾಚಾರ ಸ್ಮೃತಿ—ಸರ್ವ ಆಚಾರಗಳಿಗೆ ಮೂಲವಾದರೆ, ಕೃಷ್ಣಾಮೃತ ಮಹಾರ್ಣವ ಸಕಲವ್ರತಗಳಿಗೆ ಮೂಲ, ಯತಿಪ್ರಣವಕಲ್ಪ ಯತಿಗಳ ಸರ್ವ ಆಚಾರಗಳಿಗೆ ಮೂಲ—ಹೀಗೆ ಪ್ರತಿಯೊಂದೂ ಸರ್ವಮೂಲ.

—ಶ್ರೀ ಪ್ರಭಂಜನಾಚಾರ್ಯರು

x x x x

## ಸರ್ವ ಮೂಲಗಳ ಸಂರಕ್ಷಣೆ
## ಮಾಡದಿದ್ದಲ್ಲಿ ನಮ್ಮ ನಿರ್ಮೂಲನೆ

ಸರ್ವಶಾಸ್ತ್ರಗಳಿಗೂ ಮೂಲವಾಗಿದ್ದು, ಪರಿಪೂರ್ಣನಾಗಿರುವುದರಿಂದ 'ಸರ್ವ' ಎನಿಸುವ ಭಗವಂತನ ಪ್ರಜ್ಞೆಗೂ ಮೂಲವಾಗಿರುವುದರಿಂದ 'ಸರ್ವ ಮೂಲ' —ಎಂಬುದಾಗಿ ಅರ್ಥವತ್ತಾಗಿ ಕರೆಸಿಕೊಳ್ಳುವ ಆಚಾರ್ಯರ ಗ್ರಂಥಗಳು ನಮ್ಮ ಪೂರ್ಣಪುರುಷಾರ್ಥವಾದ ಮೋಕ್ಷಕ್ಕೂ ಮೂಲವಾದವು.

ಅಂತಹವುಗಳ ಸಂರಕ್ಷಣೆ ಮುಖ್ಯವಾಗಿ ನಮ್ಮ ಹೃದಯಗುಹೆಯಲ್ಲಿ ನಡೆಯಬೇಕಾದದ್ದು. ಅವುಗಳ ಶ್ರವಣ ಮನನ ನಿದಿಧ್ಯಾಸನಗಳನ್ನು ನಡೆಸುತ್ತ ಅವುಗಳನ್ನು ಸಂರಕ್ಷಿಸಬೇಕು. ಹೀಗೆ ಸರ್ವಮೂಲಗಳ ಸಂರಕ್ಷಣೆಯನ್ನು ನಡೆಸದಿದ್ದರೆ ನಮ್ಮ ನಿರ್ಮೂಲನವೇ ಆದೀತು!

—ಶ್ರೀ ವಿದ್ಯಾಧೀಶತೀರ್ಥರು

x x x x



# ಸಂದರ್ಶಿಸಿದ ಸ್ಥಳಗಳು

'ಪಾವನಯಾತ್ರೆ'ಯಲ್ಲಿ ಶ್ರೀ ಮಧ್ವರ ಸಂಪರ್ಕಕ್ಕೊಳಗಾದದ್ದೆಂದು ಉಲ್ಲೇಖಿಸಲ್ಪಟ್ಟ ದಕ್ಷಿಣಕನ್ನಡ ಜಿಲ್ಲೆಯ ಇಪ್ಪತ್ತೈದು ಸ್ಥಳಗಳನ್ನು ಸಂದರ್ಶಿಸ ಲಾಗಿತ್ತು. ಆ ಸ್ಥಳಗಳಲ್ಲಿ ಯಾವ ಸ್ಥಳ ಶ್ರೀ ಮಧ್ವರ ಯಾವ ಬಗೆಯ ಸಂಪರ್ಕ ಕ್ಕೊಳಗಾಗಿದೆ ಎಂದು ಉಲ್ಲೇಖಿಸಲ್ಪಟ್ಟಿದೆ? ಅಲ್ಲಿ ಈಗ ಆ ಸಂಪರ್ಕವನ್ನು ಸಾರುವಂತಹ ಏನಾದರೂ ಕುರುಹು ಇದೆಯೇ?—ಎಂಬ ಮಾಹಿತಿಯೊಂದಿಗೆ ಆ ಸ್ಥಳ ಎಲ್ಲಿದೆ? ಅಲ್ಲಿಗೆ ಹೇಗೆ ಹೋಗಬೇಕು?—ಎಂಬ ಮಾಹಿತಿಯನ್ನೂ ಯಾತ್ರೆ ನಡೆಸಿದ ಸಂದರ್ಶನಕ್ಕನುಗುಣವಾಗಿ ನೀಡಲಾಗಿದೆ—

**ಉಡುಪಿ :**

ಶ್ರೀ ಮಧ್ವರ ಕಾರ್ಯಕ್ಷೇತ್ರವಾಗಿದ್ದ ಉಡುಪಿಯಲ್ಲಿ ಸುಮಧ್ವವಿಜಯ [9-40....43] ಉಲ್ಲೇಖಿಸುತ್ತಿರುವಂತೆ ಶ್ರೀ ಮಧ್ವರು ಪ್ರತಿಷ್ಠಾಪಿಸಿದ್ದ ಶ್ರೀಕೃಷ್ಣ ವಿರಾಜಿಸುತ್ತಿದ್ದಾನೆ. ಹಾಗೆಯೇ ಮಧ್ಯಗೇಹ ದಂಪತಿಗಳು ಯಾರನ್ನು ಹನ್ನೆರಡು ವರ್ಷ ಕಾಲ ಸೇವಿಸಿ ಶ್ರೀ ಮಧ್ವರನ್ನು ಪುತ್ರರನ್ನಾಗಿ ಪಡೆದಿದ್ದರೋ [ಸು. ವಿ. 2–19....25] ವಾಯುದೇವ ಮೊದಲು ಯಾರ ಸನ್ನಿಧಾನಕ್ಕೆ ಬಂದು ನಮಿಸಿ ಬಳಿಕ ಪಾಜಕಕ್ಕೆ ತೆರಳಿ ಮಧ್ವರಾಗಿ ಅವತರಿಸಿದ್ದರೋ [ಸು. ವಿ. 2–24] ಮೂರು ನಾಲ್ಕು ವರ್ಷದ ವಾಸುದೇವ ಕೊಡವೂರಿನ ಬಂಧುಗಳ ಮನೆಯಿಂದ ತಪ್ಪಿಸಿ ಕೊಂಡು ಯಾರ ಸನ್ನಿಧಾನಕ್ಕೆ ಬಂದು ನಮಸ್ಕರಿಸಿದ್ದನೋ [ಸು. ವಿ. 3–6] ಅವ ತಾರವನ್ನು ಅದೃಶ್ಯಗೊಳಿಸುವ ಸಂದರ್ಭದಲ್ಲಿ ಯಾರ ಸನ್ನಿಧಾನದಲ್ಲಿ ಐತರೇಯದ ಪ್ರವಚನವನ್ನು ನಡೆಸುತ್ತ ಬದರಿಗೆ ತೆರಳಿದರೆಂದು [ಸು. ವಿ. 16–53,....58] ಪ್ರತೀತಿ ಇದೆಯೋ ಅಂತಹ ಅನಂತಾಸನ ಉಡುಪಿಯಲ್ಲಿ ಮೆರೆಯುತ್ತಿದ್ದಾನೆ. ಮೂರು ನಾಲ್ಕು ವರ್ಷದ ಬಾಲಕ ವಾಸುದೇವ ಶಂಕರನಾರಾಯಣ ದೇವಾಲಯ ಹಾಗೂ ಬನ್ನಂಜೆ ದೇವಾಲಯಗಳಿಗೆ ಭೇಟಿ ನೀಡಿ ಬಳಿಕ ಭೇಟಿ ನೀಡಿದ, ಸುಮಧ್ವ ವಿಜಯದಲ್ಲಿ [3–13] 'ಮಹೇಂದ್ರದಿಗಾಲಯದ ಅಧೀಶ್ವರ' ಎಂದು ಉಲ್ಲೇಖಿಸ ಲ್ಪಟ್ಟ ಚಂದ್ರಮೌಳೀಶ್ವರ ಉಡುಪಿಯಲ್ಲಿ ವಿರಾಜಮಾನನಾಗಿದ್ದಾನೆ. ಶ್ರೀಮದಾ ಚಾರ್ಯರುಪ್ರತಿನಿತ್ಯಅವಗಾಹನಸ್ನಾನನಡೆಸಿದಿದ್ದಿರಬಹುದಾದ'ಮಧ್ವಸರೋವರ' —ಎಂದೇ ಪ್ರಸಿದ್ಧವಾಗಿರುವ ಸರೋವರ ಶ್ರೀಕೃಷ್ಣ ಮಠದ ಎದುರುಗಡೆ ಇದೆ. ಶ್ರೀ ಮಧ್ವರು ಶ್ರೀಕೃಷ್ಣನನ್ನು ಪ್ರತಿಷ್ಠೆ ಮಾಡುವ ಮುಂಚೆ ಕೃಷ್ಣಪ್ರತಿಮೆಯನ್ನು

ಈ ಸರೋವರದಲ್ಲಿಯೇ ತೊಳೆದು ಅಭಿಷೇಚಿಸಿದ್ದರು [ಸು. ವಿ. 9–41] ಶ್ರೀಮಧ್ವರು ಕುಳಿತುಕೊಂಡು ಪವಿತ್ರೀಕರಿಸಿರುವ ಪೀಠವು 'ಸರ್ವಜ್ಞಸಿಂಹಾಸನ' ಎಂದು ಪ್ರಸಿದ್ಧವಾಗಿ ಶ್ರೀಕೃಷ್ಣ ಮಠದ ಗರ್ಭಗುಡಿಗೆ ಪ್ರವೇಶಿಸುವ ದ್ವಾರದ ಎದುರುಬದಿಯಲ್ಲಿ ಇದೆ. ಶ್ರೀ ಮಧ್ವರು ಸ್ಥಾಪಿಸಿದ್ದ ಅಷ್ಟ ಮಠಗಳು— ಕಾಣಿಯೂರು, ಸೋದೆ, ಪುತ್ತಿಗೆ, ಅದಮಾರು, ಪೇಜಾವರ, ಪಲಿಮಾರು, ಕೃಷ್ಣಾಪುರ ಹಾಗೂ ಶೀರೂರು—ಹೀಗೆ ಅನುಕ್ರಮವಾಗಿ ಉಡುಪಿಯ ನಾಲ್ಕು ಬೀದಿಯ ಸುತ್ತ ಇವೆ.

ಉಡುಪಿ ಬಸ್‌ಸ್ಟಾಂಡಿಗೆ ಬಂದು, ಅಲ್ಲಿಂದ ಪೂರ್ವಕ್ಕೆ ಸಾಗುವ, ಉಡುಪಿ ಸಂಸ್ಕೃತಕಾಲೇಜಿನ ಎಡಮಗ್ಗುಲಲ್ಲಿ ಮುಂದುವರಿಯುವ ಕನಕದಾಸ ರಸ್ತೆಯಿಂದ ಸುಮಾರು ಎರಡು ಫರ್ಲಾಂಗ್ ದೂರ ನಡೆದಲ್ಲಿ ಉಡುಪಿಯ ರಥಬೀದಿ ಸ್ವಾಗತಿಸುವುದು.

**ಪಾಜಕ :**

ಶ್ರೀಮದಾಚಾರ್ಯರು ಅವತರಿಸಿದ ಕ್ಷೇತ್ರ [ಸು. ವಿ 2–24, 25, 26) ಆಚಾರ್ಯರ ಪೂರ್ವಾಶ್ರಮದ ತಂದೆತಾಯಿಯಂದಿರು ವಾಸಿಸುತ್ತಿದ್ದ, ಆಚಾರ್ಯರು ತಮ್ಮ ಶೈಶವವನ್ನೂ ಬಾಲ್ಯವನ್ನೂ ಕಳೆದ ಮನೆ ಇಲ್ಲಿದೆ. ಮನೆಯಲ್ಲಿ ಅವರ ಕುಲದೇವತೆಯಾಗಿದ್ದ ಉಡುಪಿ ಅನಂತಾಸನನ ಪ್ರತೀಕ ಇದೆ. ಆಚಾರ್ಯರು ವಾಸುದೇವನಾಗಿದ್ದಾಗ ಅಕ್ಷರಾಭ್ಯಾಸ ನಡೆಸಿದ ಶಿಲೆ ಇದೆ. ತಾಯಿಯ ಮಾತಿಗನುಗುಣವಾಗಿ ಪಾತ್ರೆಯಲ್ಲಿದ್ದ ಹಾಲನ್ನು ರಕ್ಷಿಸುವುದಕ್ಕಾಗಿ ವಾಸುದೇವನು ಪಾತ್ರೆಯ ಮೇಲೆ ಮುಚ್ಚಿರುವ ಶಿಲೆ ಇದೆ. ವಾಸುದೇವ ತನ್ನ ಮನೆಯ ಅಂಗಳದಲ್ಲಿಯೇ ನಿರ್ಮಿಸಿದ 'ವಾಸುದೇವ ತೀರ್ಥ' ಇಲ್ಲಿದೆ.[1] ತಂದೆ ಹಿರಿಯರ ಎದುರು ತಾನು ವೈಷ್ಣವ ಸಿದ್ಧಾಂತವನ್ನು ಪ್ರಚುರಗೊಳಿಸುವೆನೆಂದು ಹೇಳಿ, ಅದಕ್ಕೆ ಒಡ್ಡಿದ ಸವಾಲಿಗೆ ಅನುಗುಣವಾಗಿ ಒಣಗಿದ ದಂಡವನ್ನು ನೆಟ್ಟು ಚಿಗುರಿಸಿದ್ದು[2] ಮತ್ತೆ ಅದೇ ಹೆಮ್ಮರವಾಗಿ ಬೆಳೆದ ತಾಣದ ಬನ ವಾಸುದೇವ

---

1) ....ಅಸ್ಯ ಜನಿಭೀವಾಜಾ ಯದಾ ವಾರಿತಃ । ಸ್ನಾನಾರ್ಥಂ ತ್ವನ್ಯತೇ ಸಹಾಯ ಮಧುನಾ ನೋ ಯಾಹಿ ತಾತೇತ್ಯಸೌ ತತ್ಕಾಲೇ ವ್ಯತನೋದ್ ಗೃಹಾಂತಿಕಗತಂ ಸ್ನಾನ್ಯಾಯಂ ಸತ್ಸರಃ —ಸಂಪ್ರದಾಯ ಪದ್ಧತಿ—೫

2) ಶ್ರೀಮದ್ ವೈಷ್ಣವಮಾಶನೋಽಯಂ ಸುಮತಂ ತಾತೇತಿ ಪುತ್ರೋದಿತಃ । ವಿಪ್ರಃ ಸ್ನಾತಕ ಯದಾ ತ್ವದೀಯಕರಗಾ ಯಷ್ಟಿಃ ರುಹೇಚ್ಛೇದಿದಮ್ । ಸ್ವಾದಿಷ್ಟಂ ಫಲಪೂರ್ಣಕಾಲ ಇತಿ ತತ್ಕಾಲೇ ವಟಿಂದೀರಸಾಂ ಯಷ್ಟಿಂ ನ್ಯಸ್ಯ ಮೃದಾಂ ಚಯೇಽಸ್ಯ
ಖಿ ಲಜಗತ್ ಪ್ರಾಣಪ್ರದೋಽಜೀವಯತ್ —ಸಂ. ಪ. ೭

ತೀರ್ಥದ ಎದುರುಗಡೆಯೇ ಮೆರೆಯುತ್ತಿದೆ. ಆ ಗಿಡವನ್ನು ಕಚ್ಚಿ ನಾಶಪಡಿಸ ಬೇಕೆಂದು ಹಾವಿನ ರೂಪದಲ್ಲಿ ಬಂದಿದ್ದ ಮಣಿಮಂತ ಸಿಟ್ಟಿನಿಂದ ಆ ಗಿಡವನ್ನು ಕಚ್ಚಿದ್ದರೂ ಅದಕ್ಕೆ ಏನೂ ಆಗಿಲ್ಲ (ಸಂ. ಪ. ೮) ಅಂದಾಗ, ಮನೆಯಿಂದ ದುರ್ಗಾ ಬೆಟ್ಟಕ್ಕೆ ಹೊರಟಿದ್ದ ಪುಟ್ಟ ವಾಸುದೇವನನ್ನೇ ಕೊಂದುಬಿಡಬೇಕೆಂದು ಕಾಲಿಗೆ ಕಚ್ಚಿದ್ದ. (ಸಂ. ಪ. ೯) ಆದರೆ ವಾಸುದೇವನು ತನ್ನ ಹೆಬ್ಬೆರಳಿನಿಂದ ಹಾವನ್ನೇ ಕೊಂದು ಬಿಟ್ಟಿದ್ದ. ಆ ಹಾವಿನ ಹೆಡೆಯನ್ನು ತುಳಿದ ಗುರುತು ಆ ನೆಲದಲ್ಲಿ ಅಚ್ಚೊತ್ತಿ ಉಳಿದಿರುವುದನ್ನು ಇಂದಿಗೂ ಕಾಣಬಹುದಾಗಿದೆ.[1] ಪಾಜಕದಿಂದ ದುರ್ಗಾ ಬೆಟ್ಟಕ್ಕೆ ಹೋಗುವ ದಾರಿಯಲ್ಲಿ ಎಡಬದಿಯಲ್ಲಿ ಆ ಸ್ಥಳ ಸಿಗುವುದು. ಒಮ್ಮೆ ದುರ್ಗೆಯನ್ನು ವಂದಿಸುತ್ತಿದ್ದ ವಾಸುದೇವನನ್ನು ತಾಯಿ ಉಣ್ಣಲು ಕರೆದಾಗ ಅವನು ದುರ್ಗಾಬೆಟ್ಟದ ಮೇಲಿನಿಂದ ಒಂದೇ ನೆಗತಕ್ಕೆ ಮನೆಯ ಪಕ್ಕದ ಬಂಡೆಗೆ ಚಂಗನೆ ಜಿಗಿದಿದ್ದು [ಸಂ. ಪ ೧೦] ಆಗ ಆ ಪುಟ್ಟ ಹೆಜ್ಜೆಗಳ ಗುರುತು ಬಂಡೆಯ ಮೇಲೆ ಪಡಿಮೂಡಿತ್ತು. ಆ ಪುಣ್ಯಪಾದದ ಶ್ರೀ ಚಿಹ್ನೆ ಇಂದಿಗೂ ಆ ಮನೆಯ ಬಲಮಗ್ಗುಲಲ್ಲಿ ದೃಗ್ಗೋಚರವಾಗಿ ಪೂಜೆಗೊಳ್ಳುತ್ತಿದೆ.[2] ಆ ಸ್ಥಳದಲ್ಲಿ ಶ್ರೀ ವಾದಿರಾಜ ಪ್ರತಿಷ್ಠಿತ ಶ್ರೀಮದಾಚಾರ್ಯರ ಪ್ರತಿಮೆಯುಳ್ಳ ಗುಡಿ ಇದೆ. ವಾಸುದೇವ ಹುಣಸೆಬೀಜ ಕೊಟ್ಟು ತಂದೆಯ ಋಣ ತೀರಿಸಿದ ಘಟನೆಯನ್ನು ಸಾರುವ ಕಟ್ಟೆಯೂ ವಾಸುದೇವತೀರ್ಥದ ಸಮೀಪದಲ್ಲಿಯೇ ಇತ್ತು. ಇದೀಗ ವಾಸುದೇವತೀರ್ಥದ ಪರಿಷ್ಕಾರದ ಸಂದರ್ಭದಲ್ಲಿ ಆ ಚಿಟ್ಟೆಯ ಸ್ಥಾನದಲ್ಲಿ ಜಪಮಂಟಪದ ನಿರ್ಮಾಣವಾಗಿದೆ.

ಹೀಗೆ ಆಚಾರ್ಯರು ಬಾಲಕರೂಪದಲ್ಲಿದ್ದಾಗ ನಡೆಸಿದ್ದ ಅಮಾನುಷ ಚಟುವಟಿಕೆಗಳಿಗೆ ಇನ್ನೂ ಅನೇಕ ಭೌತಿಕಸಾಕ್ಷಿಗಳು ಉಳಿದುಕೊಂಡಿವೆ.

ಪಾಜಕಕ್ಕಿಂತ ಅರ್ಧಮೈಲು ಹಿಂದೆಯೇ ಸಿಗುವ ಕುಂಜಾರಿನಲ್ಲಿ ಎಡಪಾರ್ಶ್ವದಲ್ಲಿ ದುರ್ಗಾಬೆಟ್ಟವೂ, ಬಲ ಪಾರ್ಶ್ವದಲ್ಲಿ ಪರಶುರಾಮ ಬೆಟ್ಟವೂ ಸಾಧಕರನ್ನು ಪಾಜಕಕ್ಕೆ ಸ್ವಾಗತಿಸುತ್ತಿರುತ್ತವೆ.

ದುರ್ಗಾಬೆಟ್ಟದಲ್ಲಿ ವಾಸುದೇವ ವಿಶೇಷವಾಗಿ ಆರಾಧಿಸುತ್ತಿದ್ದ ದುರ್ಗಾದೇವಿಯ ಪ್ರತಿಮೆಯೂ ಪರಶುರಾಮ ಬೆಟ್ಟದಲ್ಲಿ ಆ ದುರ್ಗಾದೇವಿಯನ್ನೂ ಪ್ರತಿ

---

1) ಸ್ವಾಂಗುಷ್ಠಾಂಗುಲಿತುಂಡೇನ ವಾಸುದೇವಾಖ್ಯಪಕ್ಷಿರಾಟ್
ಮಾರಯಾಮಾಸ ತಂ ಸರ್ಪಂ ತಲ್ಲಕ್ಷ್ಮಾದ್ಯಾಪಿ ದೃಶ್ಯತೇ ॥

—ಸಂ. ಪ. ೧೦

2) ಅನ್ಯೋನ್ಯೇಶ್ವರಣಯೋರಂಕಯುಗ್ಮಮಶ್ಮನ್ಯಭೂತ್ ತದಾ ।
ಪಾಪಾಚಲೇಂದ್ರಕುಲಿಶಮಿತ್ಯದ್ಯಾಪಿ ಗೃಹಾಂತಿಕೇ ॥ —ಸಂ. ಪ. ೧೨

ಸ್ಥಾಪಿಸಿದ ಪರಶುರಾಮನ ಪ್ರತಿಮೆಯೂ ರಾರಾಜಿಸುತ್ತಿದೆ.

ಪರಶುತೀರ್ಥ, ಧನುಸ್ತೀರ್ಥ, ಬಾಣತೀರ್ಥ ಹಾಗೂ ಗದಾತೀರ್ಥ—ಎಂಬ ನಾಲ್ಕು ತೀರ್ಥಗಳನ್ನೂ ಪರಶುರಾಮ ಕುಂಜಾರಿನಲ್ಲಿ ನಿರ್ಮಿಸಿರುವನು.[1]

ಪಾಜಕ ಉಡುಪಿಯಿಂದ ಆಗ್ನೇಯದಲ್ಲಿ ಸುಮಾರು ಎಂಟು ಮೈಲಿ ದೂರದಲ್ಲಿದೆ. ಉಡುಪಿ—ಮಂಗಳೂರು ಹೆದ್ದಾರಿಯಲ್ಲಿ ಆರು ಮೈಲಿ ಸಾಗಿದಾಗ ಕಟಪಾಡಿ ಸಿಗುವುದು. ಅಲ್ಲಿಂದ ಎಡಕ್ಕೆ ಹೋಗುವ ರಸ್ತೆಯಲ್ಲಿ ಸುಮಾರು ಮೂರು ನಾಲ್ಕು ಕಿ. ಮೀ. ದೂರ ಹೋದಾಗ ಸುಭಾಷ್‌ನಗರ ದೊರಕುವುದು. ಅಲ್ಲಿಂದ ಎಡಕ್ಕೆ ಸಾಗುವ ರಸ್ತೆಯಲ್ಲಿ ನೇರವಾಗಿ ಸುಮಾರು ಎರಡು ಮೂರು ಕಿ. ಮೀ. ಹೋಗಬೇಕು. ಸುಮಾರು ಅರ್ಧ ಮೈಲಿ ಮೊದಲೇ ಸಿಗುವ ಕುಂಜಾರನ್ನು ದಾಟಿದಾಗ ಪಾಜಕ ಕಾಣಸುವುದು.

ವಿಳಾಸ: ಶ್ರೀ ಮಾಧವ ಉಪಾಧ್ಯಾಯ ಪಾಜಕಕ್ಷೇತ್ರ ಮಠ, ಕುಂಜಾರುಗಿರಿ ಪೋಸ್ಟ್, (ದ. ಕ.)

**ದಂಡತೀರ್ಥ :**

ಆಚಾರ್ಯರು ವಾಸುದೇವನಾಗಿದ್ದಾಗ ತೋಟಂತಿಲ್ಲಾಯರಲ್ಲಿ ವೇದಾಧ್ಯಯನ ನಡೆಸಿದ ಸ್ಥಳ. ಒಂದು ದೊಡ್ಡ ಮಠ ಇದೆ. ಮಠದ ಎದುರು ಸರೋವರ ಇದೆ. ಇದೇ 'ದಂಡತೀರ್ಥ' ಎನಿಸಿದೆ. ಆ ಸರೋವರದಲ್ಲಿ ನೀರು ಬತ್ತಿದ್ದಾಗ ವಾಸುದೇವ ಒಂದು ದಂಡದಿಂದ ಆ ಸರೋವರದ ನೈಋತ್ಯದಲ್ಲಿ ಒಂದು 'ಕುಂಡಿಕೆ'ಯನ್ನು ತೋಡಿದ. ಅದರಿಂದ ಉಕ್ಕಿದ ನೀರಿನಿಂದ ಆ ಸರೋವರ ತುಂಬಿ ಗದ್ದೆಗಳಿಗೆಲ್ಲ ಬೇಕಾಗುವಷ್ಟು ನೀರು ಹರಿಯಿತು—ಎಂಬ ಐತಿಹ್ಯ ಇದೆ. ದಂಡದಿಂದ ತೋಡಿದ ಕುಂಡಿಕೆಯಲ್ಲಿ ಇಂದೂ ಪರಿಶುದ್ಧವಾದ ನೀರು ಇದೆ.

ಉಡುಪಿ-ಮಂಗಳೂರು ಹೆದ್ದಾರಿಯಲ್ಲಿ ಹತ್ತು ಕಿ. ಮೀ. ಸಾಗಿದಾಗ ಸಿಗುವ ಪಾಂಗಾಳ ಸೇತುವೆಯನ್ನು ದಾಟಿದ ಮೇಲೆ ಬಲಮಗ್ಗುಲಲ್ಲಿ ದಂಡತೀರ್ಥ ಹೈಸ್ಕೂಲು ಕಾಣಸುವುದು. ಅದಕ್ಕಿಂತ ಸುಮಾರು ಒಂದು ಫರ್ಲಾಂಗ್ ಹಿಂದೆ ಬಲಮಗ್ಗುಲಲ್ಲಿ ಸಿಗುವ ಭಾರತ ಕ್ಯಾನಿಂಗ್ ಕಂಪೆನಿಯ ಕಟ್ಟಡಕ್ಕಿಂತ ಅರ್ಧ ಫರ್ಲಾಂಗ್ ಹಿಂದೆ ಸಿಗುವ ಎಡಬದಿಯ ಓಣಿಯಲ್ಲಿ ಸಾಗಿ, ಬಲಬದಿಗೆ ತಿರುಗಿದಾಗ ದಂಡತೀರ್ಥ ಮಠ ಕಾಣಸುವುದು.

---

1) ......ಚಕಾರ ಮಾಧವಃ ಚತ್ವಾರಿ ತೀರ್ಥಾನಿ ಭೃಗೋಃ ಕುಲೋದ್ಭವಃ —ಸಂ. ಪ. ೩

**ಪಾಂಗಾಳದ ಕಟ್ಟೆ :**

ಪಾಂಗಾಳದ ಜನಾರ್ದನ ದೇವಾಲಯದ ಜನಾರ್ದನ ಈಗ ದೇವಾಲಯ ಇರುವ ಸ್ಥಳಕ್ಕಿಂತ ಒಂದು ಫರ್ಲಾಂಗ್ ಈಚೆ ಇದ್ದನು. ಪಾಜಕದಿಂದ ದಂಡ ತೀರ್ಥಕ್ಕೆ ಹೋಗುತ್ತಿದ್ದ ವಾಸುದೇವ ಅಲ್ಲಿಯ ಜನಾರ್ದನನನ್ನು ಸ್ತುತಿಸಲು ಕಟ್ಟೆಯಲ್ಲಿ ಕುಳಿತುಕೊಳ್ಳುತ್ತಿದ್ದನು. ಹೀಗೆ ವಾಸುದೇವನ ಸಂಪರ್ಕಕ್ಕೊಳಗಾಗಿ ಪವಿತ್ರವಾದ 'ಕಟ್ಟೆ' ಇಂದೂ ಇದೆ.

ಉಡುಪಿ—ಮಂಗಳೂರು ಹೆದ್ದಾರಿಯಲ್ಲಿ ಎಡಮಗ್ಗುಲಲ್ಲಿರುವ ಪಾಂಗಾಳ ಜನಾರ್ದನ ದೇವಾಲಯಕ್ಕಿಂತ ಒಂದು ಫರ್ಲಾಂಗ್ ಮೊದಲೇ ಈ ಕಟ್ಟೆ ಸಿಗುವುದು.

**ಸಂದಳಿಕೆ ಪಾಡಿಯ ಭೂತದ ಕೊಟ್ಟಿಗೆ :**

ವಾಸುದೇವನ ಬಹಿರ್ನಿಷ್ಕ್ರಮಣದ ದಿನ. ಉಡುಪಿ ಅನಂತಾಸನನಿಗೆ ಅವನನ್ನು ಸಮರ್ಪಿಸಿ ಹಿಂತಿರುಗುತ್ತಿದ್ದ ಸಂದರ್ಭ. ಉಡುಪಿಯಿಂದ ಪಾಜಕಕ್ಕೆ ಕಾಲು ನಡಿಗೆಯಿಂದ ಹೋಗುವ ದಾರಿಯ ಮಧ್ಯೆ ರಾತ್ರಿಕಾಲ ಒಬ್ಬನಲ್ಲಿ ಆವೇಶಗೊಂಡ ಪಿಶಾಚ ಶಿಶುರೂಪದ ವಾಸುದೇವನ ಸ್ತುತಿ ನಡೆಸಿದ ಸ್ಥಳ ಸಂದಳಿಕೆ ಪಾಡಿಯ ಭೂತದ ಕೊಟ್ಟಿಗೆ.

ಉಡುಪಿಯಿಂದ ಕುಕ್ಕಿಕಟ್ಟೆ ಜೋಡುರಸ್ತೆಯಲ್ಲಿ ಸಾಗಿದಾಗ, ಸಿಗುವ 'ಸಂದಳಿಕೆ ಪಾಡಿಯ' ಪ್ರಾರಂಭದಲ್ಲಿಯೇ ಈ ಭೂತದ ಕೊಟ್ಟಿಗೆ ಇದೆ.

**ಬನ್ನಂಜೆಯ ಮಹಾಲಿಂಗೇಶ್ವರ ದೇವಾಲಯ :**

ಬಂಧುಗಳ ಸಮಾರಂಭದ ಸಂಭ್ರಮದಲ್ಲಿ ತೊಡಗಿದ್ದ ತಾಯಿಯ ಕಣ್ಣು ತಪ್ಪಿಸಿ ಹೊರಟ ಮೂರು ವರ್ಷದ ಬಾಲಕ ವಾಸುದೇವ ಶಂಕರನಾರಾಯಣ ದೇವಾಲಯಕ್ಕೆ ಹೋಗಿ ಅಲ್ಲಿಂದ ಬನ್ನಂಜೆಯ ಮಹಾಲಿಂಗೇಶ್ವರ ದೇವಾಲಯಕ್ಕೆ ಬಂದಿದ್ದನು. (ಸು. ವಿ. 3—4) ಅಲ್ಲಿ ಮಹಾಲಿಂಗೇಶ್ವರಾಂತರ್ಗತನಾದ ನರಸಿಂಹನನ್ನು ಪ್ರಣಮಿಸಿದ ವಾಸುದೇವನನ್ನು ಅಲ್ಲಿಂದ ಉಡುಪಿಯ ಚಂದ್ರಮೌಳೀಶ್ವರನಲ್ಲಿಯವರೆಗೆ ಮಹಾಲಿಂಗೇಶ್ವರಾಂತರ್ಗತನಾದ ನರಸಿಂಹನೇ ಮಾರ್ಗದರ್ಶಕನಾಗಿ ಕರೆದೊಯ್ದಿದ್ದನು. (ಸು. ವಿ. 3—13)

ಹೀಗೆ ವಾಸುದೇವನಿಂದ ವಂದಿತನಾಗಿದ್ದ ಹಾಗೂ ಅಲ್ಲಿಂದ ಉಡುಪಿಯ ಚಂದ್ರಮೌಳೀಶ್ವರನಲ್ಲಿಯವರೆಗೆ ಹೋಗುವಾಗ ಅವನಿಗೆ ಗೆಳೆಯನಂತೆ ಮಾರ್ಗದರ್ಶಕನಾಗಿದ್ದ ನರಸಿಂಹ ಬನ್ನಂಜೆಯ ಮಹಾಲಿಂಗೇಶ್ವರನಲ್ಲಿ ವಿರಾಜಿಸುತ್ತಿದ್ದಾನೆ.

ಉಡುಪಿ ಶ್ರೀಕೃಷ್ಣ ಮಠದಿಂದ $\frac{3}{4}$ ಕಿ. ಮೀ. ದೂರದಲ್ಲಿ ವಾಯುವ್ಯ ದಿಕ್ಕಿನಲ್ಲಿ ನಗರಸಂಚಾರಿ ಬಸ್‌ನಿಲ್ದಾಣವಿದೆ. ಈ ನಿಲ್ದಾಣಕ್ಕೆ ಇಡುವ ಐದು ಕೂಡು ರಸ್ತೆಗಳಲ್ಲಿ ವಾಯುವ್ಯದಿಕ್ಕಿನ ರಸ್ತೆಯಲ್ಲಿ ಸುಮಾರು $\frac{3}{4}$ ಕಿ. ಮೀ. ಪಶ್ಚಿಮಕ್ಕೆ ನಡೆದಾಗ ಎಡಪಾರ್ಶ್ವದಲ್ಲಿ ಒಂದು ಅಶ್ವತ್ಥ ಮರ ಇದೆ. ಅದರ ಪಕ್ಕದಲ್ಲಿ ಇರುವ ದೇವಾಲಯ ಬನ್ನಂಜೆಯ ಮಹಾಲಿಂಗೇಶ್ವರ ದೇವಾಲಯ. ಸುಮಧ್ವವಿಜಯದಲ್ಲಿ [3—4] ಲಘುನಾರಿಕೇಲ್ಯುಪಪದಾಂತರ ಸದ್ಮ ಎಂದು ಉಲ್ಲೇಖಿಸಲ್ಪಟ್ಟಿದ್ದು, ಭಾವಪ್ರಕಾಶಿಕಾದಲ್ಲಿ 'ತಾಳಿಕುಡೆ' ಎಂದು ಅಪಭ್ರಷ್ಟ ಭಾಷೆಯಲ್ಲಿ ಕರೆಸಿಕೊಳ್ಳುವಂತಹದ್ದೆಂದು ವಿವರಿಸಲಾಗಿದೆ.

**ಸಮುದ್ರದ ತೀರ:**

ದ್ವಾರಕೆಯಿಂದ ಉಡುಪಿಗೆ ಸಾಗಿ ಬಂದಿದ್ದ ಶ್ರೀಕೃಷ್ಣನ ಪ್ರತಿಮೆಯನ್ನು ಶ್ರೀ ಮಧ್ವಾಚಾರ್ಯರು ಸಮುದ್ರತೀರದ ಈ ಪ್ರದೇಶದಲ್ಲಿಯೇ ಪಡೆದದ್ದು. ಪ್ರತಿಮೆ ದೊರಕಿದ ಜಾಗವನ್ನು ನಿರ್ದಿಷ್ಟವಾಗಿ ಗುರುತಿಸಲು ಬೇಕಾದ ಕುರುಹು ಸಿಗುವುದಿಲ್ಲವಾದರೂ 'ಒಡಭಾಂಡೇಶ್ವರ' ಎಂಬುದಾಗಿ ಅನ್ವರ್ಥಕವಾಗಿ ಕರೆಸಿಕೊಳ್ಳುವ ಆ ಪ್ರದೇಶದ ಸಮೀಪದಲ್ಲಿಯೇ ಶ್ರೀಕೃಷ್ಣನ ಪ್ರತೀಕದ ಪ್ರಾಪ್ತಿಯಾದದ್ದೆಂದು ಸ್ಥೂಲವಾಗಿ ತಿಳಿಯಬಹುದಷ್ಟೇ.

ಉಡುಪಿಯ ನಗರಸಂಚಾರಿ ಬಸ್‌ನಿಲ್ದಾಣದಿಂದ ವಾಯುವ್ಯದಿಕ್ಕಿಗೆ ಹೋಗುವ ರಸ್ತೆಯಲ್ಲಿ 5 ಕಿ. ಮೀ. ಪಶ್ಚಿಮಕ್ಕೆ ಹೋದಾಗ ಮಲ್ಪೆ ಬಸ್‌ನಿಲ್ದಾಣ ದೊರಕುವುದು. ಅಲ್ಲಿಂದ ಪೂರ್ವಕ್ಕೆ ಸುಮಾರು 25 ಮೀ. ಮುಂದೆ ಸರಿದಾಗ ಉತ್ತರಕ್ಕೆ 'ತೊಟ್ಟಂ'ಗೆ ಹೋಗುವ ರಸ್ತೆ ಸಿಗುವುದು. ಈ ರಸ್ತೆಯಲ್ಲಿ ಸುಮಾರು 1 ಕಿ. ಮೀ. ದೂರ ಉತ್ತರಕ್ಕೆ ಹೋದಾಗ ಒಂದು ವೃತ್ತ ಕಾಣಿಸುವುದು. ಆ ವೃತ್ತದಿಂದ $\frac{3}{4}$ ಕಿ. ಮೀ. ದೂರದಲ್ಲಿ ವಡಭಾಂಡೇಶ್ವರ ದೇವಾಲಯ ಇದೆ. ಅಲ್ಲಿಂದ ಸುಮಾರು ಅರ್ಧ ಕಿ. ಮೀ. ಪಶ್ಚಿಮದಿಕ್ಕಿಗೆ ಹೋದಲ್ಲಿ ಸಮುದ್ರದ ತೀರ ಸಿಗುವುದು.

**ಕೊಡವೂರು ಶಂಕರನಾರಾಯಣ ದೇವಾಲಯ:**

ತಾಯಿ ಬಂಧುಗಳ ಸಮಾರಂಭದ ಸಂಭ್ರಮದಲ್ಲಿ ಮುಳುಗಿದ್ದಾಗ ಅಲ್ಲಿಂದ ಹೊರಟಿದ್ದ ಮೂರುವರ್ಷದ ಬಾಲಕ ವಾಸುದೇವ ನೇರವಾಗಿ ಕೊಡವೂರಿನ ಶಂಕರನಾರಾಯಣ ದೇವಾಲಯಕ್ಕೆ ಬಂದಿದ್ದನು. ಅಲ್ಲಿ ರುದ್ರಾಂತರ್ಗತ ಶ್ರೀ ನಾರಾಯಣನಿಗೆ ನಮಸ್ಕರಿಸಿದ್ದನು [ಸು. ವಿ. 3-4] ವಾಸುದೇವನನ್ನು ಆ ಸಮಾರಂಭದ ಮನೆಯಿಂದ ಶಂಕರನಾರಾಯಣ ದೇವಾಲಯದವರೆಗೆ ಹಾಗೂ ಅಲ್ಲಿಂದ

ಬನ್ನಂಜೆ ಮಹಾಲಿಂಗೇಶ್ವರ ದೇವಾಲಯದವರೆಗೆ ಕೊಡವೂರಿನ ರುದ್ರಾಂತರ್ಗತ ನಾರಾಯಣನೇ ಕರೆದೊಯ್ದಿದ್ದನು. [3-12] ಸುಮಧ್ವವಿಜಯದಲ್ಲಿ ಕೊಡವೂರು ಶಂಕರನಾರಾಯಣ ದೇವಾಲಯ 'ಕಾನನ ದೇವತಾಸದನ' ಎಂದು ಉಲ್ಲೇಖಿಸಲ್ಪಟ್ಟಿದೆ.

ಉಡುಪಿ ನಗರ ಸಂಚಾರಿ ಬಸ್‌ನಿಲ್ದಾಣದಿಂದ ವಾಯುವ್ಯದಿಕ್ಕಿಗೆ ಹೋಗುವ ರಸ್ತೆಯಲ್ಲಿ 5 ಕಿ. ಮೀ. ಪಶ್ಚಿಮಕ್ಕೆ ಹೋದಾಗ ಮಲ್ಪೆ ನಿಲ್ದಾಣ ಸಿಗುವುದು. ಇಲ್ಲಿಂದ ಪೂರ್ವಕ್ಕೆ ಸುಮಾರು ಕಾಲು ಕಿ. ಮೀ. ದೂರ ಸಾಗಿದಾಗ ಉತ್ತರಕ್ಕೆ 'ತೊಟ್ಟಂ'ಗೆ ಹೋಗುವ ರಸ್ತೆ ಸಿಗುವುದು. ಈ ರಸ್ತೆಯಲ್ಲಿ ಸುಮಾರು ಒಂದು ಕಿ.ಮೀ. ಉತ್ತರಕ್ಕೆ ಸಾಗಿದಾಗ ಸಿಗುವ ವೃತ್ತದಿಂದ ಪೂರ್ವಕ್ಕೆ ಸುಮಾರು ಎರಡೂವರೆ ಕಿ. ಮೀ. ದೂರ ಹೋದಲ್ಲಿ ಆ ರಸ್ತೆಗೆ ಅಭಿಮುಖವಾಗಿ ಕೊಡವೂರು ಶಂಕರ ನಾರಾಯಣ ದೇವಾಲಯ ಕಾಣಸುವುದು.

**ಕಾಂತಾವರದ ಕಾಂತೇಶ್ವರ ದೇವಾಲಯ :**

ಗಂಡವಾಟ ಎಂಬ ಮಲ್ಲ ತನ್ನ ಸಹೋದರನಿಂದ ಕೂಡಿಕೊಂಡು ಶ್ರೀಮಧ್ವಾಚಾರ್ಯರ ಮಲ್ಲವಿದ್ಯೆಯ ಪ್ರಾವೀಣ್ಯವನ್ನು ಪರೀಕ್ಷಿಸಿದ್ದನು. ಅಂತಹ ಮಲ್ಲನನ್ನು ಪರಿಚಯಿಸಿಕೊಡುವಾಗ ಕಾಂತೇಶ್ವರ ದೇವಾಲಯದಲ್ಲಿದ್ದ, ಮೂವತ್ತು ಸಮರ್ಥ ಮನುಷ್ಯ ತಂದಿರಿಸಿದ್ದ ಒಂದು ಧ್ವಜಸ್ತಂಭವನ್ನು ತಾನೊಬ್ಬನೇ ಎತ್ತಿಟ್ಟಿದ್ದನೋ ಅಂತಹವನು [ಸು. ವಿ. 16—26] ಎಂಬುದಾಗಿ ಕಾಂತಾವರ ಕಾಂತೇಶ್ವರ ದೇವಾಲಯದ ಸಂಬಂಧವನ್ನು ಉಲ್ಲೇಖಿಸಿರುವುದರಿಂದ ಆ ಗಂಡವಾಟ ಕಾಂತಾವರಕ್ಕೇ ಸೇರಿದವನಾಗಿದ್ದಿರಬಹುದೆಂದೂ ಅವನು ತನ್ನಊರಿನ ಕಾಂತೇಶ್ವರ ದೇವಾಲಯದಲ್ಲಿಯೇ ಶ್ರೀಮದಾಚಾರ್ಯರ ಮಲ್ಲವಿದ್ಯೆಯ ಪರೀಕ್ಷೆಯನ್ನು ನಡೆಸಿದ್ದಿರಬಹುದೆಂದೂ ವಿಮರ್ಶಕರು ಅಭಿಪ್ರಾಯ ಪಡುವರು. ಆದ್ದರಿಂದ ವಿಮರ್ಶಕರ ಪ್ರಕಾರ ಮಲ್ಲವಿದ್ಯಾ ಪರೀಕ್ಷೆಯ ಅಂಗವಾಗಿ ಗಂಡವಾಟನು ತನ್ನ ಸಹೋದರನಿಂದ ಕೂಡಿಕೊಂಡು ಕಾಂತಾವರದ ಕಾಂತೇಶ್ವರ ದೇವಾಲಯದಲ್ಲಿ ಆಚಾರ್ಯರ ಕಂಠವನ್ನು ಅಮುಕಿದುದು; ಭೂಮಿಯ ಮೇಲೆ ಇಟ್ಟಿದ್ದ ಅವರ ಬೆರಳನ್ನು ಎತ್ತಲು ಯತ್ನಿಸಿದುದು. [ಸು. ವಿ. 16-27, 29].

ಅಲ್ಲದೆ, ಇದೇ ಸಂದರ್ಭದಲ್ಲಿ ಉಲ್ಲೇಖಿಸಲ್ಪಟ್ಟಿರುವ [ಸು. ವಿ. 16-30] ಶ್ರೀಮದಾಚಾರ್ಯರು ತಮ್ಮ 'ಲಘಿಮಾಸಿದ್ಧಿ'ಯನ್ನು ತೋರಿಸಿಕೊಡುವುದಕ್ಕಾಗಿ ಒಬ್ಬ ವಟುವಿನ ಮೇಲೆ ಕುಳಿತುಕೊಂಡು ನರಸಿಂಹ ದೇವಾಲಯವನ್ನು ಪ್ರದಕ್ಷಿಣೆ ಬಂದರೆಂಬ ಘಟನೆಯೂ ಕಾಂತಾವರದ ಕಾಂತೇಶ್ವರ ದೇವಾಲಯದಲ್ಲಿಯೇ ನಡೆದದ್ದೆಂದು ವಿದ್ವಾಂಸರ ಆಶಯ. ಕಾಂತೇಶ್ವರ ದೇವಾಲಯದಲ್ಲಿರುವ ಕಾಂತೇಶ್ವರ

ಎನಿಸುವ ರುದ್ರನಲ್ಲಿ ಶ್ರೀ ನರಸಿಂಹನ ವಿಶೇಷಾವೇಶವಿರುವ ಪ್ರಯುಕ್ತ, ಆ ದೇವಾಲಯ 'ನೃಸಿಂಹಗೇಹ'—ಎಂದು ಉಲ್ಲೇಖಿಸಲ್ಪಟ್ಟಿದೆ—ಎಂದು ವಿದ್ವಾಂಸರು ಸಮರ್ಥಿಸುವರು.

ಅಂತೂ ಶ್ರೀಮದಾಚಾರ್ಯರ ದೈಹಿಕ ಸಾಮರ್ಥ್ಯವನ್ನೂ ಮಹಿಮಾ ಲಕ್ಷಿಮಾಸಿದ್ಧಿಗಳನ್ನೂ ತೋರಿಸುವಲ್ಲಿ ಆಸರೆಯಾಗಿದ್ದ ದೇವಾಲಯ ಕಾಂತಾವರದ ಶ್ರೀ ಕಾಂತೇಶ್ವರ ದೇವಾಲಯ. ಇಲ್ಲಿ ಆಚಾರ್ಯರ ಸಂಪರ್ಕವನ್ನು ಜ್ಞಾಪಿಸಿಕೊಡುವ ಸ್ಮಾರಕವೆಂದರೆ ಕಾಂತೇಶ್ವರ ದೇವಾಲಯದ ಕೆಳಭಾಗದಲ್ಲಿ ಇರುವ ಪಲಿಮಾರು ಮಠ ಮಾತ್ರ.

ಪಡುಬಿದ್ರೆ—ಕಾರ್ಕಳ ರಸ್ತೆಯಲ್ಲಿ ಹೋಗಿ, ಪಡುಬಿದ್ರೆಯಿಂದ ಸುಮಾರು 15 ಕಿ. ಮೀ. ದೂರದಲ್ಲಿರುವ "ಬೆಳ್ಮಣ್ಣು"—ಇದರಿಂದ 3 ಕಿ. ಮೀ. ಆನಂತರ ಸಿಗುವ 'ಮುಂಜರಪಲ್ಕೆ'ಯಿಂದ ಬಲಕ್ಕೆ ತಿರುಗಿ 10 ಕಿ. ಮೀ. ಹೋದಾಗ ಕಾಂತವರ ಊರು ಸಿಗುವುದು. ಅಲ್ಲಿಂದ ಬಲಭಾಗದ ರಸ್ತೆಯಲ್ಲಿ ಅರ್ಧ ಫರ್ಲಾಂಗ ದಾಟಿದಾಗ 'ಕಾಂತಾವರ ದೇವಾಲಯ' ಕಾಣಿಸುವುದು.

**ಭದ್ರಾನದಿಯ ತೀರದ ಭೀಮನ ಬಂಡೆ :**

ಒಮ್ಮೆ ಶ್ರೀಮದಾಚಾರ್ಯರು ಭದ್ರಾನದಿಯ ತೀರದ ಕಳಸ ಎಂಬ ಗ್ರಾಮದ ಬಳಿಯಲ್ಲಿ ಸಂಚಾರ ಮಾಡುತ್ತ ನದೀತೀರದಲ್ಲಿ ಇರಿಸಲೆಂದು ಸಾವಿರಾರು ಜನರಿಂದ ತರಲ್ಪಟ್ಟು ಮುಂದೆ ಕೊಂಡೊಯ್ಯಲಾಗದೆ ದಾರಿಯ ಮಧ್ಯದಲ್ಲಿಯೇ ಬಿಡಲ್ಪಟ್ಟಿದ್ದ ದೊಡ್ಡ ಬಂಡೆಯನ್ನು ಕಂಡರು. ಜನರ ಉಪಕಾರಕ್ಕಾಗಿ ಇದನ್ನು ಎಲ್ಲಿ ಇಡಬೇಕೋ ಅಲ್ಲಿಗೆ ಯಾಕೆ ಸಾಗಿಸಲಿಲ್ಲ? ಎಂದು ಅಲ್ಲಿಯವರಲ್ಲಿ ವಿಚಾರಿಸಿದರು. ಅದನ್ನು ಯಾರಿಗೂ ಕೊಂಡೊಯ್ಯಲಾಗದೆ ಅಲ್ಲಿಯೇ ಬಿಡಲಾಗಿದೆ ಎಂದು ಅವರು ತಿಳಿಸಲು ಶ್ರೀಮದಾಚಾರ್ಯರು ಅನಾಯಾಸವಾಗಿ ಒಂದೇ ಕೈಯಿಂದ ಆ ಬಂಡೆಯನ್ನು ಎತ್ತಿ, ಅದನ್ನು ಎಲ್ಲಿ ಇಡಬೇಕಿತ್ತೋ ಅಲ್ಲಿ ಇಟ್ಟರು. ಸುಮಧ್ವಜಯದಲ್ಲಿ [16—7, 8, 9] ಈ ಘಟನೆಯನ್ನು ಉಲ್ಲೇಖಿಸಿರುವ ಶ್ರೀ ನಾರಾಯಣ ಪಂಡಿತರು 'ಶ್ರೀ ಮಧ್ವರಿಂದ ಭದ್ರಾನದಿಯ ತೀರದಲ್ಲಿ ಇಡಲ್ಪಟ್ಟಿದ್ದ ದೊಡ್ಡ ಬಂಡೆಯನ್ನು ಈಗಲೂ ಕಾಣಬಹುದು'—ಎಂದೂ ತಿಳಿಸಿರುವರು.

ಕಳಸಗ್ರಾಮದ ಅಂಬುತೀರ್ಥದ ಬಳಿ ಇಂದಿಗೂ ಈ ಬಂಡೆಯನ್ನು ಕಾಣಬಹುದಾಗಿದೆ. 'ಶ್ರೀ ಮಧ್ವಾಚಾರ್ಯೈರೇಕಹಸ್ತೇನ ಆನೀಯ ಸ್ಥಾಪಿತಾ ಶಿಲಾ' ಎಂಬುದಾಗಿ ಕನ್ನಡಲಿಪಿಯಲ್ಲಿ ಸಂಸ್ಕೃತ ಭಾಷೆಯಲ್ಲಿ ಆ ಬಂಡೆಯ ಮೇಲೆ ಕೊರೆಯಲಾಗಿದೆ. ಶ್ರೀಮದಾಚಾರ್ಯರ ರೇಖಾಚಿತ್ರವೂ ಇದೆ. 20′×16′×10′ ಗಾತ್ರದ 50 ಟನ್ ತೂಕದ ಅದು ಶ್ರೀ ಭೀಮಸೇನನೇ ಮಧ್ವರಾಗಿ ಅವತರಿಸಿರುವ

ರೆಂಬುದನ್ನೂ, ಶ್ರೀ ಮಧ್ವರ ದೈಹಿಕ ಸಾಮರ್ಥ್ಯವನ್ನೂ ಮೂಕವಾಗಿ ಸಾರುತ್ತಿದೆ.

ಚಿಕ್ಕಮಗಳೂರು ಜಿಲ್ಲೆಯ ಕಳಸಗ್ರಾಮಕ್ಕೆ ಹೋಗಿ ಅಲ್ಲಿ ಹೊರನಾಡಿಗೆ ಹೋಗುವ ರಸ್ತೆಯಲ್ಲಿ ಮುಂದುವರಿಯಬೇಕು. ಆ ರಸ್ತೆಯ ಎಡಬದಿಯಲ್ಲಿ ಶ್ರೀ ವೇಂಕಟರಮಣದೇವಾಲಯ ಸಿಗುವುದು. ಇನ್ನೂ ಸ್ವಲ್ಪ ಮುಂದುವರಿದಾಗ ಸಿಗುವ ಎಡಬದಿಗೆ ಸಾಗುವ ಮಣ್ಣಿನ ರಸ್ತೆಯಲ್ಲಿ ಹೋಗಬೇಕು. ಸುಮಾರು ಎರಡು ಫರ್ಲಾಂಗಷ್ಟು ದೂರ ಹೋದಾಗ ಎರಡು ಕವಲು ದಾರಿಗಳು ಸಿಗುವವು. ಅವುಗಳಲ್ಲಿ ಬಲಬದಿಯ ರಸ್ತೆಯಲ್ಲಿ ನೇರವಾಗಿ ಸುಮಾರು ಎರಡು ಕಿ. ಮೀ. ದೂರ ಸಾಗಿದಾಗ ಭದ್ರಾನದಿಯ ತೀರ ಸಿಗುವುದು. ಅಲ್ಲಿಂದ ಅರ್ಧ ಫರ್ಲಾಂಗಿನಷ್ಟು ಪೂರ್ವದಿಕ್ಕಿಗೆ ಸಾಗಿದರೆ ಅಲ್ಲಿ ಭದ್ರಾನದಿಯ ತೀರದಲ್ಲಿ ಆಚಾರ್ಯರ ಸ್ಪರ್ಶದಿಂದ ಪುನೀತವಾದ ಶಿಲೆ ಆಚಾರ್ಯರ ಶಿಷ್ಯರಾದ ನಮ್ಮನ್ನು ಪವಿತ್ರೀಕರಿಸಲು ನಿರೀಕ್ಷಿಸುತ್ತಿರುವುದು ಕಾಣಸುವುದು.

## ಮಧ್ವ :

ಆಚಾರ್ಯರು ಉಡುಪಿಯಿಂದ ಮಧ್ಯವಾಟ ಮಠಕ್ಕೆ ಹೋಗುವಾಗ ಭಕ್ತ ಜನರ ಪ್ರಾರ್ಥನೆಯಂತೆ ಸ್ವಲ್ಪಕಾಲ ತಂಗಿದ್ದ ಸ್ಥಳ ಇದು ಎಂದು ಐತಿಹ್ಯ ಇದೆ. ಆಚಾರ್ಯರು ಕುಳಿತುಕೊಳ್ಳುತ್ತಿದ್ದರೆನ್ನಲಾಗುವ ಒಂದು ಕಟ್ಟೆ ಇದೆ. ಒಂದು ನಾಗಾಕಾರದ ಶಿಲಾಶಾಸನವೂ ಇದೆ. 'ಮದ್ದ' ಎಂದು ಕರೆಯಲ್ಪಡುವ ಇಲ್ಲಿ ಮಧ್ವನವಮೀ ಉತ್ಸವ ಆಚರಿಸಲ್ಪಡುವುದು.

ಬಂಟವಾಳದಿಂದ 18 ಕಿ. ಮೀ. ದೂರದಲ್ಲಿರುವ 'ಮಧ್ವ'ಕ್ಕೆ ಹೋಗಲು ಮಂಗಳೂರಿನಿಂದ ಧರ್ಮಸ್ಥಳಕ್ಕೆ ಹೋಗುವ ಚಾರ್ಮಾಡಿ ರಸ್ತೆಯಲ್ಲಿ ಮಂಗಳೂರಿನಿಂದ ಸುಮಾರು $38\frac{3}{4}$ ಕಿ. ಮೀ. ದಾಟಿದಾಗ ಸಿಗುವ 'ಮಧ್ವ' ಎಂಬ ಹೆಸರಿನ ಊರಿನಲ್ಲಿಯೇ ಇಳಿಯಬೇಕು. ಕಾವಳಪಡೂರು ಹಿರಿಯ ಪ್ರಾಥಮಿಕ ಶಾಲೆಯ ಎಡಬದಿಯಿಂದ ಹೋಗುವ ಮಣ್ಣಿನ ದಾರಿಯಲ್ಲಿ ಸುಮಾರು ಅರ್ಧ ಫರ್ಲಾಂಗ್ ಸಾಗಿದರೆ ಆಚಾರ್ಯರು ಕುಳಿತು ಪವಿತ್ರೀಕರಿಸಿರುವರೆನ್ನಲಾದ 'ಕಟ್ಟೆ' ಕಾಣಸುವುದು.

## ಮಧ್ಯವಾಟ ಮಠ:

ಶ್ರೀ ಮಧ್ವರು ಕೆಲವು ವರ್ಷಕಾಲ ತಾವೇ ಉಡುಪಿ ಮತ್ತು ಸುಬ್ರಹ್ಮಣ್ಯ ಗಳಲ್ಲಿ ಪ್ರತಿನಿತ್ಯದ ಪೂಜೆಯನ್ನು ಮಾಡುತ್ತಿದ್ದರೆಂದೂ ಪೂಜೆಗಾಗಿ ಸಾಗುವಾಗ ಮಧ್ಯದಲ್ಲಿ ಈ ಸ್ಥಳದಲ್ಲಿದ್ದ ಮಠದಲ್ಲಿ ಶ್ರೀ ವೇದವ್ಯಾಸರನ್ನು ಪೂಜಿಸುತ್ತಿದ್ದ

ರೆಂದೂ ಐತಿಹ್ಯವಿದೆ. ಬದರಿಯಲ್ಲಿ ಶ್ರೀ ವೇದವ್ಯಾಸರಿಂದ ಪಡೆದಿದ್ದ ಎಂಟು ವ್ಯಾಸಮುಷ್ಟಿಗಳಲ್ಲಿ ಒಂದನ್ನು ಮಧ್ಯವಾಟ ಮಠದಲ್ಲಿ ಸ್ಥಾಪಿಸಲಾಗಿತ್ತು. ಅಲ್ಲದೆ, ಅಲ್ಲಿ ಶ್ರೀ ವೇದವ್ಯಾಸರ ಪ್ರತೀಕವೂ ಇತ್ತು. ಮಧ್ಯವಾಟ ಮಠದಲ್ಲಿ ಪೂಜಿಸಲಾಗುತ್ತಿದ್ದ ವ್ಯಾಸಮುಷ್ಟಿ ಈಗ ಸೋದೆಮಠದಲ್ಲಿ ಪೂಜಿಸಲ್ಪಡುತ್ತಿದೆ. ಶ್ರೀ ಮಧ್ವರು ತಂಗುತ್ತಿದ್ದ ಮಂಟಪ ಇಲ್ಲಿದೆ.

ಧರ್ಮಸ್ಥಳ—ಉಜಿರೆ ಮಾರ್ಗದಲ್ಲಿ ಮಂಗಳೂರಿನಿಂದ 46 ಕಿ. ಮೀ. ದೂರ ದಲ್ಲಿ ಸಿಗುವ 'ಮೂರ್ಜೆ' ಎಂಬಲ್ಲಿ ಇಳಿಯಬೇಕು. ಅಲ್ಲಿಂದ ಪಡಬದಿಗೆ ಹೋಗುವ ಡಾಮರ್ ರಸ್ತೆಯಲ್ಲಿ 2 ಕಿ. ಮೀ. ದೂರ ಸಾಗಿದಾಗ ಸಿಗುವ ಕವಲು ದಾರಿಯಲ್ಲಿ ಎಡಕ್ಕೆ 3 ಕಿ. ಮೀ. ದಾಟಿದಾಗ 'ಮಧ್ಯವಾಟ' ದೊರಕುವುದು.

**ಎರ್ಕಿಮಠ:**

ಗ್ರೀಷ್ಮ ಕಾಲದಲ್ಲಿ ಆಚಾರ್ಯರು ಇಲ್ಲಿಗೆ ಬಂದಿದ್ದರು. ಇಲ್ಲಿಯ ಕೆರೆ ಒಣಗಿ ಹೋಗಿತ್ತು. ಆಚಾರ್ಯರು ಮೋಡಗಳನ್ನು ತರಿಸಿ, ಆ ಕೆರೆ ತುಂಬು ವಷ್ಟು ಮಳೆಯನ್ನು ಬರಿಸಿದ್ದರು. [16—38] ಆಚಾರ್ಯರು ಹಾಗೆ ಗ್ರೀಷ್ಮ ಕಾಲದಲ್ಲಿ ಮಳೆ ಬರಿಸಿ ತುಂಬಿಸಿದ್ದ ಅಲ್ಲಿಯ ಕೆರೆ ಮೋಡಗಳನ್ನು ಕಲೆಹಾಕಿ ಮಳೆ ಬರಿಸುವಷ್ಟು ಪ್ರಕೃತಿಯ ಮೇಲೆ ಆಚಾರ್ಯರಿಗಿದ್ದ ಹಿಡಿತವನ್ನೂ ಅವರೇ ವಾಯುದೇವರು ಎಂಬುದನ್ನೂ ಸಾರುತ್ತಿದೆ.

ದುಷ್ಟ ಜನರ ಕೆಟ್ಟ ವಿಚಾರಗಳಿಂದ ಪ್ರಚೋದಿತನಾಗಿ ಆಚಾರ್ಯರಿಗೆ ಹೊಡೆಯಬೇಕೆಂದು ಬಂದಿದ್ದ ಈ ಗ್ರಾಮದ ಗೌಡ ಆಚಾರ್ಯರನ್ನು ದೂರದಲ್ಲಿ ಕಂಡು ಅವರ ವ್ಯಕ್ತಿತ್ವಕ್ಕೆ ಮಾರು ಹೋಗಿ ನಮಸ್ಕರಿಸಿದ್ದನು [16-39]

ಶ್ರೀಕೃಷ್ಣಾಮೃತ ಮಹಾರ್ಣವದ ಮೊದಲ ಮಂಗಲಾಚರಣೆಯಲ್ಲಿ ಪ್ರತಿ ಪಾದ್ಯನಾದ ಆಚಾರ್ಯ ಕರಾರ್ಚಿತ ಶ್ರೀ ಭೂ ಸಹಿತನಾದ ಕೇಶವನ ಪ್ರತಿಮೆ ಇಲ್ಲಿದೆ. ಈ ಪ್ರತಿಮೆಯ ಅರ್ಚಕರು ಗೃಹಸ್ಥರಾಗಿರುವರಾದರೂ ಇವರಿಗೆ ಪ್ರಥಮೈಕಾದಶಿಯಂದು ಮುದ್ರಾಧಾರಣ ನಡೆಸುವ ಅಧಿಕಾರ ಆಚಾರ್ಯರ ಕಾಲದಿಂದಲೇ ದೊರಕಿದೆ.

'ಎರ್ಕಿಮಠ'—ಎಂದು ಈಗ ಪ್ರಸಿದ್ಧವಾಗಿರುವ ಈ ಪ್ರದೇಶವನ್ನು ಸುಮಧ್ವವಿಜಯದಲ್ಲಿ 'ಸರಿದಂತರ'ದ ಬಳಿಯ ಪ್ರದೇಶ ಎಂದು ಉಲ್ಲೇಖಿಸ ಲಾಗಿದೆ. ಸರಿದಂತರವನ್ನು ಅಪಭ್ರಷ್ಟ ಭಾಷೆಯಲ್ಲಿ 'ಇಡೇತುದೇ' ಎಂದೆನಿಸಿದೆ ಎಂದು ಭಾವ ಪ್ರಕಾಶಿಕಾದಲ್ಲಿ ತಿಳಿಸಲಾಗಿದೆ.

ಮಂಗಳೂರಿನಿಂದ 63 ಕಿ. ಮೀ. ದೂರದಲ್ಲಿರುವ ಎರ್ಕಿ ಮಠಕ್ಕೆ ಉಪ್ಪಿ

ನಂಗಡಿ—ಕಡಬ—ಸುಬ್ರಹ್ಮಣ್ಯ ರಸ್ತೆಯಲ್ಲಿ ಹೋಗಬೇಕು. ಉಪ್ಪಿನಂಗಡಿಯಿಂದ 10 ಕಿ. ಮೀ. ದೂರದಲ್ಲಿ ಆತೂರಿನ ನಿಲ್ದಾಣ ಸಿಗುವುದು. ಅಲ್ಲಿಂದ ಎಡಕ್ಕೆ ಗೋಳಿದಡಿಯ ನಿಲ್ದಾಣದಿಂದ ಪೂರ್ವದಿಕ್ಕಿಗೆ ಸಾಗುವ ಮಣ್ಣಿನ ರಸ್ತೆಯಲ್ಲಿ 1 ಕಿ. ಮೀ. ಹೋದಾಗ ಎರ್ಕಿಮಠ ಕಾಣಸುವುದು.

ಉಪ್ಪಿನಂಗಡಿಯಿಂದ 10 ಕಿ. ಮೀ. ದೂರ ಇರುವ ಆತೂರಿನ ನಿಲ್ದಾಣಕ್ಕೆ ಬೇಕಾದಷ್ಟು ವಾಹನಸೌಕರ್ಯ ಇದೆ.

ಎರ್ಕಿ ಮಠದ ವಿಳಾಸ— ಶ್ರೀ ವೇಂಕಟರಮಣ ಉಪಾಧ್ಯಾಯ, ಎರ್ಕಿಮಠ, ರಾಮಕುಂಜ,
ಪುತ್ತೂರು.

**ಕೊಡಿಪಾಡಿ :**

ಕಾವು ಮಠದಲ್ಲಿ ಪುಂಡರೀಕಪುರಿ, ಪದ್ಮತೀರ್ಥ ಮುಂತಾದ ಕುವಾದಿಗಳನ್ನು ಜಯಿಸಿದ ಶ್ರೀಮದಾಚಾರ್ಯರು ಕೊಡಿಪಾಡಿಯ ಜನಾರ್ದನ ದೇವಾಲಯದಲ್ಲಿ ಚಾತುರ್ಮಾಸ್ಯ ವ್ರತವನ್ನು ಕೈಗೊಂಡಿದ್ದರು. 'ಪ್ರಾಗ್ರ್ಯವಾಟ' ಎಂದು ಉಲ್ಲೇಖಿಸಲ್ಪಟ್ಟಿರುವ [ಸು. ವಿ. 12-54] ಇಲ್ಲಿಯ ಚಾತುರ್ಮಾಸ್ಯ ವ್ರತ ಪರಿಸಮಾಪ್ತಿಯ ಹುಣ್ಣಿಮೆಯ ರಾತ್ರಿಯಲ್ಲಿಯೇ ಪದ್ಮತೀರ್ಥನು ಪಲಾಯನ ಮಾಡಿದ್ದನ್ನು ತಿಳಿದ ಆ ಗ್ರಾಮದ ಜನರು ಅವನಿಂದ ಅಪಹೃತಗಳಾಗಿದ್ದ ಗ್ರಂಥಗಳನ್ನು ಶ್ರೀಮದಾಚಾರ್ಯರಿಗೆ ಸಮರ್ಪಿಸಿದರೆಂದೂ, ಶ್ರೀಮದಾಚಾರ್ಯರು ಅವನ್ನೆಲ್ಲ ರಾಜನ ಸನ್ನಿಧಿಯಲ್ಲಿ ಪದ್ಮತೀರ್ಥನು ಎಸಗಿದ ಅನ್ಯಾಯವನ್ನು ಪ್ರಕಟಿಸಿಯೇ ಸ್ವೀಕರಿಸುವುದಾಗಿ ಹೇಳಿ ಆ ಗ್ರಾಮದ ಮಧ್ಯಸ್ಥನ ಬಳಿಯೇ ಇರಿಸಿದರೆಂದೂ ಸುಮಧ್ವವಿಜಯದ ಛಲಾರೀ ವ್ಯಾಖ್ಯಾನದಲ್ಲಿದೆ.

ಅಂತೂ ಶ್ರೀಮದಾಚಾರ್ಯರ ಅಪಹೃತ ಗ್ರಂಥಗಳನ್ನು ಮತ್ತೆ ಒದಗಿಸಿಕೊಟ್ಟ ಹಿರಿಮೆ ಕೊಡಿಪಾಡಿದ್ದಾಗಿದೆ. ಚಾತುರ್ಮಾಸ್ಯ ವ್ರತದ ಕಾಲದಲ್ಲಿ ಪ್ರತಿನಿತ್ಯ ಆಚಾರ್ಯರ ಸಂದರ್ಶನಕ್ಕೆ ಪಾತ್ರನಾಗಿದ್ದಿರಬಹುದಾದ 'ಜನಾರ್ದನ' ಇಲ್ಲಿ ವಿರಾಜಿಸುತ್ತಿದ್ದಾನೆ. ಆಚಾರ್ಯರ ಪ್ರತಿನಿತ್ಯದ ಅವಗಾಹನ ಸ್ನಾನದಿಂದ ಪುನೀತವಾಗಿರುವ 'ಸರೋವರ' ದೇವಸ್ಥಾನದ ಹಿಂಭಾಗದಲ್ಲಿದೆ. ಆಚಾರ್ಯರು ಆಸೀನರಾಗಿದ್ದರೆಂದು ಹೇಳಲಾಗುವ ಕಲ್ಲಿನ ಪೀಠವೂ ತನ್ನ ಮೇಲೆ ಕುಳಿತು ಆಚಾರ್ಯರು ಜಪ, ಧ್ಯಾನಾದಿಗಳನ್ನು ನಡೆಸುತ್ತಿದ್ದುದನ್ನು ಅಥವಾ ಪಾಠಪ್ರವಚನಗಳನ್ನು ನಿರ್ವಹಿಸುತ್ತಿದ್ದುದನ್ನು ಮೌನವಾಗಿ ಸಾರುತ್ತಿದೆ. ಸರೋವರದ ಬಳಿ ಶ್ರೀಮದಾಚಾರ್ಯರ 'ಆಹ್ನಿಕ ಮಂಟಪ'ಗಳ ಅವಶೇಷಗಳೂ ಉಂಟು.

ಮಂಗಳೂರು—ಪುತ್ತೂರು ರಸ್ತೆಯಲ್ಲಿ ಮುಂದುವರಿದು ಬಿ.ಸಿ. ರೋಡಿನಿಂದ

ಸುಮಾರು 7 ಕಿ.ಮೀ. ದೂರ ಹೋದಾಗ ಸಿಗುವ ಮಾಣಿಯಲ್ಲಿ ಕವಲುಮಾರ್ಗ ಗಳು ಇವೆ. ಇವುಗಳಲ್ಲಿ ಬಲಬದಿಯ ಪುತ್ತೂರು—ಮೈಸೂರು ರಸ್ತೆಯಲ್ಲಿ 18 ಕಿ. ಮೀ. ಸಾಗಿದಾಗ ಪುತ್ತೂರಿಗಿಂತ 2 ಕಿ. ಮೀ. ದೂರದಲ್ಲಿ ಸಿಗುವ ಕೊಡಿ ಪಾಡಿ ದೇವಸ್ಥಾನಕ್ಕೆ ತಿರುಗುವ ರಸ್ತೆಯಲ್ಲಿ ಕಮಾನು ಕಾಣಿಸುವುದು. ಆ ರಸ್ತೆ ಯಲ್ಲಿ ನೇರವಾಗಿ 3 ಕಿ. ಮೀ ದೂರ ಹೋದಲ್ಲಿ ಕೊಡಿಪಾಡಿ ಜನಾರ್ದನ ದೇವಾಲಯ ಸಿಗುವುದು

**ಅಡೂರಿನ ಮಹಾಲಿಂಗೇಶ್ವರ ದೇವಾಲಯ :**

ರಾಮೇಶ್ವರದಲ್ಲಿ ಚಾತುರ್ಮಾಸ್ಯ ವ್ರತವನ್ನು ಪೂರೈಸಿದ ಶ್ರೀ ಮಧ್ವಾ ಚಾರ್ಯರು ಕ್ರಮೇಣ ಪಯಸ್ವಿನೀ ನದಿಯ ತೀರದಲ್ಲಿರುವ ಅಡೂರಿನ ಮಹಾ ಲಿಂಗೇಶ್ವರ ದೇವಾಲಯಕ್ಕೆ ಬಂದಿದ್ದರು. ಪಯಸ್ವಿನೀ ತಟವಲ್ಲಿರುವ ಒಂದು ದೇವಾಲಯವನ್ನು ಪ್ರವೇಶಿಸಿದರೆಂದು ಸುಮಧ್ವವಿಜಯದಲ್ಲಿ ಉಲ್ಲೇಖಿಸ ಲ್ಪಟ್ಟಿದೆ. [5-49] ಷಡಂಗ ಸಹಿತವಾಗಿ ವೇದದ ಅಧ್ಯಯನ ನಡೆಸಿದ್ದ ಅನೇಕ ಬ್ರಾಹ್ಮಣ ಶ್ರೇಷ್ಠರು ಶ್ರೀ ಮಧ್ವರನ್ನು ಕಾಣಲು ಬಂದಿದ್ದರು. ಆ ವಿದ್ವತ್ ಸಭೆಯಲ್ಲಿ ಒಬ್ಬ ಹಿರಿಯ ಪಂಡಿತ ಆಚಾರ್ಯರಲ್ಲಿ ಒಂದು ಐತರೇಯ ಸೂಕ್ತದ ಅರ್ಥವನ್ನು ಕೇಳುವನು. ಆಚಾರ್ಯರು ವಿವರಿಸುವರು. ಅಲ್ಲಿಯ ವಿದ್ವಾಂಸರು ಆ ಸೂಕ್ತಕ್ಕೆ ಬೇರೆ ಅರ್ಥ ಹೇಳಿ, ಶ್ರೀ ಮಧ್ವರು ಹೇಳಿದ ಅರ್ಥ ಸರಿಯಲ್ಲ ಎನ್ನುವರು. ಅದಕ್ಕೆ ಶ್ರೀಮದಾಚಾರ್ಯರು ಆ ಸೂಕ್ತಕ್ಕೆ ಎರಡೂ ಅರ್ಥಗಳು ಆಗಬಹುದೆಂದು ತಿಳಿಸಿ, ತಮ್ಮ ಹೇಳಿಕೆಗೆ ಆಧಾರವಾಗಿ 'ಸ್ಕಂದ ಪುರಾಣ'ದ ಸಂದೇಶವನ್ನು ಪ್ರಸ್ತಾಪಿಸುವರು—ಶ್ರುತಿಗಳಿಗೆ ಕನಿಷ್ಠವಾಗಿ ಮೂರು ಅರ್ಥಗಳು, ಮಹಾಭಾರತಕ್ಕೆ ಕನಿಷ್ಠ ಹತ್ತು ಅರ್ಥಗಳು; ವಿಷ್ಣುಸಹಸ್ರನಾಮದ ಒಂದೊಂದು ನಾಮಕ್ಕೂ ಕನಿಷ್ಠ ನೂರು ಅರ್ಥಗಳು—ಇವೆ ಎಂದು. ಹಾಗಾದರೆ ವಿಷ್ಣುಸಹಸ್ರ ನಾಮದ ನಾಮಕ್ಕೆ ನೂರು ಅರ್ಥಗಳನ್ನು ಹೇಳಿ ನೋಡೋಣ ಎಂದು ಆ ವಿದ್ವಾಂಸರು ಸವಾಲು ಒಡ್ಡಲು—ತಾವು ಹೇಳಿದಂತೆ ಅನುವಾದ ಮಾಡಬೇಕೆಂಬ ಕರಾರಿನ ಮೇಲೆ ಶ್ರೀಮದಾಚಾರ್ಯರು ಪ್ರತ್ಯಯ, ಪ್ರಕೃತಿ ಮುಂತಾದವುಗಳ ವಿಮೋಚನೆಯೊಂದಿಗೆ 'ವಿಶ್ವ'ನಾಮದ ಅರ್ಥಗಳನ್ನು ಹೇಳಹೊರಟರು. ಇನ್ನೂ ಆ ನಾಮಕ್ಕೆ ನೂರು ಅರ್ಥಗಳನ್ನು ವಿವರಿಸುವ ಮುಂಚೆಯೇ ಅವರು ವಿವರಿಸಿ ದ್ದನ್ನು ಧಾರಣೆ ಮಾಡಲು ಅಸಮರ್ಥರಾದ ಆ ವಿದ್ವಾಂಸರು, ಆಚಾರ್ಯರ ಪ್ರತಿಭೆಯನ್ನು ಕೊಂಡಾಡಿ ಕ್ಷಮಾಯಾಚನೆ ಮಾಡಿದರು. [6—1 ... 10]

ಹೀಗೆ ಶ್ರೀ ಮಧ್ವಾಚಾರ್ಯರಿಂದ ವಿವರಿಸಲ್ಪಟ್ಟಿದ್ದ ವಿಷ್ಣುಸಹಸ್ರನಾಮದ 'ವಿಶ್ವ'ನಾಮದ ಅನೇಕ ಅರ್ಥಗಳನ್ನು ಕೇಳಿಸಿಕೊಂಡು ಪ್ರಸನ್ನನಾಗಿದ್ದ ಮಹಾ

ಲಿಂಗೇಶ್ವರ ಈ ದೇವಾಲಯದಲ್ಲಿ ಮೆರೆಯುತ್ತಿದ್ದಾನೆ.

ಶ್ರೀ ಮಧ್ವಾಚಾರ್ಯರಿಂದ ಹೇಗೆ ವಿಷ್ಣುಸಹಸ್ರನಾಮದ ಅರ್ಥಗಳು ಹೇಳಲ್ಪಟ್ಟವು ಎಂಬುದರ ಬಗ್ಗೆ ಅಲ್ಲಿ ಯಾವುದೇ ಕುರುಹು ದೊರಕುವುದಿಲ್ಲ ಆದರೂ ಅಲ್ಲಿಯ ಅಧಿಕಾರಿಗಳ ಹೇಳಿಕೆಯ ಪ್ರಕಾರ ಅಲ್ಲಿಗೆ ಶ್ರೀ ಮಧ್ವರು ಬಂದು ವಿದ್ವಾಂಸರ ಜೊತೆಗೆ ವಾದ ನಡೆಸಿದರು. ವಾದದಲ್ಲಿ ವಿದ್ವಾಂಸರು ಸೋತರು. ಊರಿನ ಭಾವುಕರೆಲ್ಲ ಆಚಾರ್ಯರು ಅಲ್ಲಿಯೇ ಭಿಕ್ಷೆ ನಡೆಸಬೇಕೆಂದು ಕೇಳಿಕೊಂಡರು. ಬರೇ ರುದ್ರನ ದೇವಾಲಯದಲ್ಲಿ ತಾವು ಭಿಕ್ಷೆ ಸ್ವೀಕರಿಸುವುದಿಲ್ಲ ಎನ್ನಲು ಶ್ರೀ ಮಧ್ವರ ಮೂಲಕ ಮಹಾಲಿಂಗೇಶ್ವರನ ಬಲ ಪಾರ್ಶ್ವದಲ್ಲಿ ಶ್ರೀ ವಿಷ್ಣುವಿನ ಪ್ರತಿಮೆಯ ಪ್ರತಿಷ್ಠೆಯನ್ನೂ ನಡೆಸಲಾಯಿತು. ಶ್ರೀ ಮಧ್ವರು ತಮ್ಮ ಪರಿವಾರದ ಬಾರಿತ್ತಾಯ ವಂಶದ ಒಬ್ಬ ಬ್ರಾಹ್ಮಣನನ್ನು ಅಲ್ಲಿಯ ಪೂಜೆಗೆ ನಿಯೋಜಿಸಿದ್ದು, ಆ ವಂಶದ ಶ್ರೀಕೃಷ್ಣ ಬಾರಿತ್ತಾಯರು ಈಗ ದೇವಸ್ಥಾನದ ಪ್ರಮುಖ ವ್ಯಕ್ತಿಗಳಲ್ಲಿ ಒಬ್ಬರಾಗಿದ್ದಾರೆ

ಹೀಗೆ ಅಲ್ಲಿಯವರೆಲ್ಲ ಒಕ್ಕೊರಲಿನಿಂದ ತಿಳಿಸುವಂತೆ ಶ್ರೀ ಮಧ್ವರ ಮೂಲಕ ಪ್ರತಿಷ್ಠಿತನಾದ ಶ್ರೀ ವಿಷ್ಣುವಿನ ಪ್ರತಿಮೆ ಅಲ್ಲಿ ವಿರಾಜಿಸುತ್ತಿದೆ. ವಿಷ್ಣುಮಂದಿರದ ಎದುರುಗಡೆ ಅಕ್ಕಪಕ್ಕಗಳಲ್ಲಿ ಗರುಡ ಮತ್ತು ಮುಖ್ಯಪ್ರಾಣನ ಪ್ರತಿಮೆಗಳೂ ಇವೆ.

ಮಂಗಳೂರಿನಿಂದ ಸುಮಾರು 100 ಕಿ. ಮೀ. ದೂರದಲ್ಲಿರುವ ಅಡೂರ್ ಮಹಾಲಿಂಗೇಶ್ವರ ದೇವಾಲಯಕ್ಕೆ ಮಂಗಳೂರಿನಿಂದ ಕಾಸರಗೋಡಿಗೆ ಹೋಗಿ ಅಲ್ಲಿಂದ ಸುಳ್ಯ, ಮಡಿಕೇರಿ ಹೋಗುವ ದಾರಿಯಲ್ಲಿ ಮುಳ್ಳೇರಿಯ, ಅದೂರು ಊರುಗಳನ್ನು ದಾಟಿ, ಸಿಗುವ ಕೊಟ್ಯಾಡಿಯಲ್ಲಿ ದಕ್ಷಿಣಕ್ಕೆ ಹೋಗುವ ರಸ್ತೆಯಲ್ಲಿ 4 ಕಿ. ಮೀ. ದೂರ ಸಾಗಿದರೆ ಅಡೂರಿನ ಮಹಾಲಿಂಗೇಶ್ವರ ದೇವಾಲಯ ಕಾಣಸುವುದು. ಕೊಟ್ಯಾಡಿಯಿಂದ 2 ಕಿ. ಮೀ. ದೂರದಲ್ಲಿ ಪಯಸ್ವಿನೀ ನದಿ; ಅದರ ದಕ್ಷಿಣ ದಡಿಯಲ್ಲಿ 2 ಕಿ. ಮೀ. ದೂರದಲ್ಲಿ ಮಹಾಲಿಂಗೇಶ್ವರ ದೇವಸ್ಥಾನ ಇದೆ. ಕಾಸರಗೋಡಿನಿಂದ ಅಡೂರಿಗೆ ಒಂದೂ ಕಾಲು ಗಂಟೆ ಅವಧಿಯ ಸಂಚಾರವಿದ್ದು, ಸಾಕಷ್ಟು ಬಸ್ಸುಗಳಿವೆ.

## ಪಯಸ್ವಿನೀ ನದಿ :

ಶ್ರೀ ವಿಷ್ಣು ಮಂಗಲದಿಂದ ಮುಂದೆ ಸಾಗಿ ಕ್ರಮೇಣ ತಿರುವನಂತಪುರಕ್ಕೆ ತೆರಳುತ್ತ ಶ್ರೀ ಮಧ್ವಾಚಾರ್ಯರು ಮಾರ್ಗಮಧ್ಯದಲ್ಲಿ ಪಯಸ್ವಿನೀ ನದಿಯನ್ನು ಕಂಡು ಅದರ ತೀರದಲ್ಲಿಯೇ ಮುಂದೆ ದುರ್ಗೆಯ ಅವತಾರವಾಗುವುದೆಂದು ಸ್ಮರಿಸಿಕೊಂಡರು ಎಂದಿದೆ [5–35]

ಅಡೂರಿನ ಮಹಾಲಿಂಗೇಶ್ವರ ದೇವಾಲಯ ಈ ನದಿಯ ತೀರದಲ್ಲಿಯೇ ಇದೆ.

**ಪಾರಂತಿಯ ಪಂಚಲಿಂಗೇಶ್ವರ ದೇವಾಲಯ :**

ಶ್ರೀ ಮಧ್ವರು ಒಮ್ಮೆ ಪಾರಂತಿಯ ಪಂಚಲಿಂಗೇಶ್ವರ ದೇವಾಲಯವನ್ನು ಪ್ರವೇಶಿಸಿದರು. ಅಲ್ಲಿ ಬಹುಕಾಲದಿಂದ ನೈವೇದ್ಯಾದಿಗಳು ನಿಂತು ಹೋಗಿದ್ದವು. ಶ್ರೀಮದಾಚಾರ್ಯರು ತಮ್ಮ 'ವಶಿತ್ವ' ಎಂಬ ಸಿದ್ಧಿಯಿಂದಾಗಿ ಆ ಗ್ರಾಮದ ಅಧಿಕಾರಿಗಳನ್ನೆಲ್ಲ ಕರೆಸಿ ಅರ್ಧ ದಿವಸದಲ್ಲಿಯೇ ದೇವಾಲಯದಲ್ಲಿ ನಡೆಯಬೇಕಾದ ನಿತ್ಯ ನೈಮಿತ್ತಿಕ ಕಾರ್ಯಕ್ರಮಗಳು ನಡೆಯುವಂತೆ ತಕ್ಕ ಏರ್ಪಾಟನ್ನು ಮಾಡಿದರು. ತಾವು ಭೀಮರಾಗಿದ್ದಾಗ ವನವಾಸದ ಸಂದರ್ಭದಲ್ಲಿ ಯುಧಿಷ್ಠಿರಾದಿಗಳಿಂದ ಕೂಡಿಕೊಂಡು ಪಂಚರೂಪಿ ಶ್ರೀ ಹರಿಯನ್ನು ಅಲ್ಲಿ ಪ್ರತಿಷ್ಠಾಪಿಸಿದ್ದನ್ನೂ ಪೂಜೆಗೆ ಬೇಕಾದ ನೀರನ್ನು ತರುತ್ತಿದ್ದ ದ್ರೌಪದಿಯ ಜೊತೆಗೆ ತಾವು ಆ ಪ್ರತಿಮಾ ಮಾಧ್ಯಮದಲ್ಲಿ ಶ್ರೀಹರಿಯನ್ನು ಪೂಜಿಸಿದುದನ್ನೂ ಸ್ಮರಿಸಿಕೊಂಡರು—ಎಂದು ಉಲ್ಲೇಖಿಸಲಾಗಿದೆ [16–36, 37]

ಸಂಸ್ಕೃತದಲ್ಲಿ 'ಪಾರಂತೀಸುರಸದನ' ಎಂದು ನಮೂದಿಸಲ್ಪಟ್ಟ ಈ ದೇವಾಲಯ ಅಪಭ್ರಷ್ಟಭಾಷೆಯಲ್ಲಿ 'ಕೇವುಡದೇವಲ'–ಎಂದು ಕರೆಸಿಕೊಳ್ಳಲ್ಪಡುವುದೆಂದು ಭಾವಪ್ರಕಾಶಿಕಾದಲ್ಲಿ ತಿಳಿಸಲಾಗಿದೆ. ಈಗ ಈ ಊರು 'ಮುದ್ಯ' ಎಂದು ಕರೆಸಿಕೊಳ್ಳಲ್ಪಡುವುದು.

ಇಲ್ಲಿ ಐದು ಲಿಂಗಗಳಿವೆ. ಅವು ಸಾಲಿಗ್ರಾಮದಂತೆ ಸ್ವಾಭಾವಿಕಗಳಾದ ಶಿಲೆಗಳಾಗಿವೆಯೇ ಹೊರತು ಕಡೆದು ನಿರ್ಮಿಸಲ್ಪಟ್ಟವುಗಳಂತೆ ಇಲ್ಲ. ಅಲ್ಲದೆ, ಗಿಡ್ಡವಾಗಿದ್ದು, ಬುಡದಲ್ಲಿ ದಪ್ಪವಾಗಿದ್ದು ಶ್ರೀವಿಷ್ಣುವಿನ ಪ್ರತಿಮೆಗಳೆಂದು ಸ್ಪಷ್ಟವಾಗುವವು. ರುದ್ರದೇವಾಲಯಗಳಲ್ಲಿ ಸಾಮಾನ್ಯವಾಗಿ ಇರುವ ನಂದಿಯ ಪ್ರತಿಮೆಯಾಗಲೀ, ರುದ್ರಲಿಂಗದ ಮೇಲೆ ನೀರಿನ ಧಾರೆಯನ್ನು ಸುರಿಸುವ 'ಜಲದ್ರೋಣಿ'ಯಾಗಲೀ ಅಲ್ಲಿ ಇದ್ದಿಲ್ಲವಂತೆ. ಇತ್ತೀಚೆಗಷ್ಟೇ ಅವನ್ನು ತಂದಿರಿಸಲಾಗಿದೆ.

ದೇವಾಲಯದ ಪ್ರಾಂಗಣದಲ್ಲಿ ಶ್ರೀ ಮಧ್ವಾಚಾರ್ಯರ ಸಂಪರ್ಕಕ್ಕೊಳಗಾದದ್ದೆನ್ನಲಾಗುವ ಒಂದು ನೆಲ್ಲಿಕಾಯಿ ಮರವು ಬೆಳೆದು ನಿಂತಿದೆ.

ಉಪ್ಪಿನಂಗಡಿಯಿಂದ ಬೆಂಗಳೂರಿಗೆ ಹೋಗುವ ಹೆದ್ದಾರಿಯಲ್ಲಿ, ಉಪ್ಪಿನಂಗಡಿಯಿಂದ 11 ಕಿ. ಮೀ. ಸಾಗಿದಾಗ ಎಡಬದಿಯಲ್ಲಿ ಕಾಂಚನಕ್ಕೆ ಹೋಗುವ ರಸ್ತೆ ಸಿಗುವುದು. 'ಕಾಂಚನಕ್ಕೆ ಹೋಗುವ ರಸ್ತೆ' —ಎಂಬ ಫಲಕವನ್ನೂ ಅಲ್ಲಿ

ಸ್ಥಾಪಿಸಲಾಗಿದೆ. ಆ ರಸ್ತೆಯಲ್ಲಿ 2 ಕಿ. ಮೀ. ದಾಟಿದಾಗ ಸಿಗುವ ಕವಲು ರಸ್ತೆಗಳಲ್ಲಿ ಬಲಬದಿಗೆ ಹೋಗುವ ರಸ್ತೆಯಲ್ಲಿ 2 ಕಿ. ಮೀ. ಸಾಗಿದಾಗ 'ಪೆರಿಯಡ್ಕ'—ಎಂಬ ಊರು ಸಿಗುವುದು. ಅಲ್ಲಿ ಬಲಬದಿಗಿರುವ ಮುದ್ಯ ದೇವಾಲಯದ ತಿರುವಿನಲ್ಲಿ ಮಣ್ಣಿನ ಮಾರ್ಗವಾಗಿ 1 ಕಿ. ಮೀ. ಸಾಗಿದಾಗ ಸಿಗುವ ಕವಲು ದಾರಿಗಳಲ್ಲಿ ಬಲಬದಿಯ ದಾರಿಯಲ್ಲಿ ಅರ್ಧ ಕಿ. ಮೀ. ದೂರ ಹೋಗಿ, ಕಾಲು ದಾರಿಯಲ್ಲಿ ಮುಂದುವರಿದಾಗ ಪಾರಂತೀ ದೇವಾಲಯ ಕಾಣಿಸುವುದು.

ಅಥವಾ ಉಪ್ಪಿನಂಗಡಿಯಿಂದ 9 ಕಿ. ಮೀ. ದೂರದಲ್ಲಿ ಸಿಗುವ 'ಒಳಲು' ಊರಿನಲ್ಲಿ, ಭೂತದ ಹೆಸರಲ್ಲಿ ಕಾಣಿಕೆಡಬ್ಬಿ ಇಟ್ಟಿರುವಲ್ಲಿ ಇಳಿದು ಬಲಬದಿಗೆ ಸಾಗುವ ಕಾಲುದಾರಿಯಲ್ಲಿ 1 ಕಿ. ಮೀ. ದೂರ ಹೋದರೆ ಪಾರಂತೀ ದೇವಾಲಯ ಸಿಗುವುದು.

ಉಪ್ಪಿನಂಗಡಿಯಿಂದ ಕಾಂಚನಕ್ಕೆ ಬಸ್‌ವ್ಯವಸ್ಥೆ ಇದೆ. ಆದರೆ ವಿರಳವಾಗಿ ಇದೆಯಷ್ಟೇ. ಈ ಬಸ್ಸಿನಲ್ಲಿ ಸಾಗಿ ಮಂಜಿಪಳ್ಳ ಅಂಗಡಿ ಮುದ್ಯ ಇಲ್ಲಿ ಇಳಿದು, ಮುಂದುವರಿಯಬೇಕು. ಅಲ್ಲಿಯ ವಿಳಾಸ—ಶ್ರೀ ಅನಂತಕೃಷ್ಣ ಉಡುಪ, ಮುದ್ಯ ಬಜತ್ತೂರು ಗ್ರಾಮ ಪುತ್ತೂರು—574241

## ಕೊಕ್ಕಡದ ಮಹಾಲಿಂಗೇಶ್ವರ ದೇವಾಲಯ :

ಶ್ರೀ ಮಧ್ವರು ಇಲ್ಲಿಗೆ ಬಂದು 'ಇಡೆಪಾಡಿತ್ತಾಯ' ಎಂಬ ಭಕ್ತನೊಬ್ಬನನ್ನು ನಿಮಿತ್ತನನ್ನಾಗಿ ಇಟ್ಟುಕೊಂಡು ಸಕಲ ಸಜ್ಜನರ ಶ್ರೇಯಸ್ಸಿಗಾಗಿ ಪುರಾಣಗಳಿಂದ ಆಯ್ದ ಶ್ಲೋಕಗಳ ಸಂಗ್ರಹಾತ್ಮಕವಾದ 'ಶ್ರೀಕೃಷ್ಣಾಮೃತಮಹಾರ್ಣವ'—ಎಂಬ ಗ್ರಂಥವನ್ನು ರಚಿಸಿರುವರು [ಸು. ವಿ. 16-40]

ಕೊಕ್ಕಡವನ್ನು ತ್ರಿಭುವನ ವೈದ್ಯನಾಥನೇ ನಾಥನಾಗಿ ಉಳ್ಳ ಕ್ಷೇತ್ರಾಗ್ರ್ಯ ಎಂದು ಉಲ್ಲೇಖಿಸಿದ್ದು. ಇಲ್ಲಿಯ ಮಹಾಲಿಂಗೇಶ್ವರ ದೇವಾಲಯದಲ್ಲಿ ಮಹಾಲಿಂಗೇಶ್ವರನಲ್ಲಿ ಧನ್ವಂತರಿ ವಿಶೇಷವಾಗಿ ಸನ್ನಿಹಿತನಾಗಿರುವನೆಂದು ಸೂಚಿಸಲಾಗಿದೆ. ಇಲ್ಲಿ ಶ್ರೀಮದಾಚಾರ್ಯರು ಕೃಷ್ಣಾಮೃತಮಹಾರ್ಣವ ರಚಿಸಿದ ವಿಷಯದಲ್ಲಿ ಯಾವುದೇ ಕುರುಹು ಇಲ್ಲ.

ಬರೇ ರುದ್ರದೇವಾಲಯ ಎನಿಸಿರುವ ಇಲ್ಲಿ ತಾವು ಭಿಕ್ಷೆ ಸ್ವೀಕರಿಸುವುದಿಲ್ಲ ಎಂದ ಶ್ರೀ ಮಧ್ವಾಚಾರ್ಯರು ತಮ್ಮಲ್ಲಿ ಭಿಕ್ಷೆ ಸ್ವೀಕರಿಸುವಂತಾಗಬೇಕೆಂದು ಪ್ರಾರ್ಥಿಸಿಕೊಂಡು ಅಲ್ಲಿಯ ಭಕ್ತರ ವಿನಂತಿಗೆ ಅನುಗುಣವಾಗಿ ಶ್ರೀ ಮಧ್ವಾಚಾರ್ಯರ ಮೂಲಕ ಮಹಾಲಿಂಗೇಶ್ವರ ದೇವಾಲಯದ ಎಡಮಗ್ಗುಲಲ್ಲಿ ಶ್ರೀ ವಿಷ್ಣುವಿನ ಪ್ರತಿಮೆಯನ್ನು ಪ್ರತಿಷ್ಠಾಪಿಸಲಾಯಿತೆಂದು ಅಲ್ಲಿಯ ಅರ್ಚಕರು, ಅಧಿ

ಕಾರಿಗಳು ತಿಳಿಸುವರು.

ಹೀಗೆ ಶ್ರೀ ಮಧ್ವರಿಂದ ಪ್ರತಿಷ್ಠಿತ ಎಂದು ನಂಬಲಾದ ಶ್ರೀ ವಿಷ್ಣುವಿನ ಪ್ರತಿಮೆಯನ್ನೊಳಗೊಂಡ ಗುಡಿ ಮಹಾಲಿಂಗೇಶ್ವರನ ಎಡಪಾರ್ಶ್ವದಲ್ಲಿದ್ದು, ಅದು ಆ ದೇವಾಲಯಕ್ಕೆ ಶ್ರೀ ಮಧ್ವರ ಸಂಪರ್ಕವನ್ನು ಸಾರುತ್ತಿದೆಯಷ್ಟೇ. ಬಳಿಯಲ್ಲಿಯೇ ವಿಶಾಲವಾದ ಒಂದು ಸರೋವರವೂ ಉಂಟು.

ಮಂಗಳೂರು—ಬೆಂಗಳೂರು ರಸ್ತೆಯಲ್ಲಿ ಉಪ್ಪಿನಂಗಡಿಯಿಂದ 19 ಕಿ ಮೀ ದೂರ ಇರುವ 'ನೆಲ್ಯಾಡಿ' ಊರನ್ನು ದಾಟಿ 3 ಕಿ. ಮೀ. ಅನಂತರ ಸಿಗುವ ಎಡ ಬದಿಯ ಧರ್ಮಸ್ಥಳ ರಸ್ತೆಯಲ್ಲಿ 5 ಕಿ. ಮೀ. ದಾಟಿದಾಗ ಒಂದು ವೃತ್ತ ಸಿಗುವುದು. ಅದರ ಕವಲು ರಸ್ತೆಗಳಲ್ಲಿ ಎಡಗಡೆಯ 1 ಫರ್ಲಾಂಗ್ ದೂರದಲ್ಲಿ ಕೊಕ್ಕಡಪೇಟೆ ಸಿಗುವುದು. ಪೇಟೆಯ ಎಡಗಡೆಯ ಹಿಂದೆ ಕೊಕ್ಕಡ ಮಹಾಲಿಂಗೇಶ್ವರ ದೇವಾಲಯ ಇದೆ.

**ಕಟ್ಟೆಲ :**

ಕಾಲದೋಷದಿಂದ ಸತ್‌ಸಿದ್ಧಾಂತ ಮರೆಯಾದಾಗ, ಧರ್ಮ ಮಸುಕಾದಾಗ ಶ್ರೀ ವಿಷ್ಣುತೀರ್ಥರು ಕುಮಾರಪರ್ವತದಿಂದ ಇಳಿದು ಬಂದು ಇಲ್ಲಿ ಭೂಗತವಾಗಿರುವ ಗ್ರಂಥಗಳನ್ನು ಅಗೆದು ತೆಗೆದು ಪುನಃ ಈ ಸಿದ್ಧಾಂತವನ್ನು ಪ್ರಚುರಗೊಳಿಸುವರು.[1] ಆಚಾರ್ಯರು ಶ್ರೀ ವಿಷ್ಣುತೀರ್ಥರಿಗೆ ಆದೇಶಿಸಿದ್ದರು—ಮುಂದೆ ಪುನಃ ಧರ್ಮ ಮಸುಕಾದಾಗ ನೀನು ಇನ್ನೊಮ್ಮೆ ಇಳಿದು ಬಂದು ಸದ್‌ಧರ್ಮದ ಎಳ್ಳಿನಷ್ಟಾದರೂ ಜನತೆಗೆ ಉಪದೇಶಿಸು." ಈ ಆದೇಶದ ಹಿನ್ನೆಲೆಯಲ್ಲಿಯೇ ಈ ಕ್ಷೇತ್ರಕ್ಕೆ 'ಸೇತುತಿಲ' — 'ಕಟ್ಟೆಲ' ಎಂಬ ಹೆಸರು ಬಂದಿದೆ. ಶ್ರೀ ವಿಷ್ಣುತೀರ್ಥರು ಆಚಾರ್ಯರ ಆದೇಶಕ್ಕೆ ಅನುಗುಣವಾಗಿ ಕಟ್ಟೆಲದಲ್ಲಿ ಭೂಗತವಾಡಿದ ಗ್ರಂಥಗಳನ್ನು ಅಗೆದು ತೆಗೆದು ಸತ್ಸಿದ್ಧಾಂತವನ್ನು ಪ್ರಚುರಪಡಿಸುವರು. ಎಂಬುದಾಗಿ ಶ್ರೀ ಹೃಷೀಕೇಶತೀರ್ಥರು ತಮ್ಮ 'ಸಂಪ್ರದಾಯ ಪದ್ಧತಿ'ಯಲ್ಲಿ ತಿಳಿಸಿರುವರು.[2]

---

1 ತಿರೋಹಿತೇ ಸನ್ಮತೇಽಸ್ಮಿನ್ ವಿಷ್ಣುತೀರ್ಥೋ ಗುಹಾಚಲಾತ್ ।
ಆಗತ್ಯೋದ್ಧೃತ್ಯ ತತ್ರತ್ಯಗ್ರಂಥಾನ್ ಸ ಪ್ರಥಯಿಷ್ಯತಿ ॥ —ಸಂ. ಪ. 21

2 ಯಸ್ಮಾತ್ ಸರ್ವಹೃದಿಸ್ಥಸಂಶಯಚಯಂ ಜ್ಞಾತ್ವಾ ಯತೀಶೋ ಮರುತ್
ಸದ್ಧರ್ಮಾಂಶ್ಚ ತಿಲಾಂಶತೋಽಪ್ಯುಪದಿಶೇತ್ಯಾಜ್ಞಾನಿಬಂಧಂ ವ್ಯಧಾತ್ ।
ತಸ್ಮಾತ್ ಸೇತುತಿಲೇತಿ ಲೋಕಗದಿತಂ ಕ್ಷೇತ್ರಂ ಸುತೀರ್ಥಾತ್ಮಕಂ
ಸ್ಕಂದಾದ್ರೇರ್ಬಿಲತೋಽವತೀರ್ಣಯತಿನಾ ಸಂಶೋಧ್ಯತೇ ಕಾಲತಃ ॥
—ಸಂ. ಪ. 22

ಕಟ್ಟೆಲದಲ್ಲಿರುವ ಅದಮಾರು ಮಠದ ಸುಮಾರು ಒಂದು ಫರ್ಲಾಂಗ್ ದೂರದಲ್ಲಿ ಸುತ್ತ ಪ್ರಾಕಾರ ಕಾಣಿಸುವುದು. ಅದರ ಮಧ್ಯದಲ್ಲಿ ಒಂದು ಕುಂಡಿಕೆ—ಚಿಕ್ಕಬಾವಿ, ಸುಮಾರು 2 ಅಡಿಗಳಷ್ಟು ಆಳವಷ್ಟೇ. ಅದರೊಳಗೆ ಸರ್ವಮೂಲ ಗ್ರಂಥಗಳನ್ನು ಭೂಗತವನ್ನಾಗಿಸಲಾಗಿದೆ. ತಾಮ್ರದ ತಗಡುಗಳಲ್ಲಿ ಸರ್ವಮೂಲ ಗ್ರಂಥಗಳನ್ನು ಬರೆದು ಹೂತಿಟ್ಟದ್ದರಿಂದ ತಾಮ್ರದ ವಾಸನೆವುಳ್ಳ ನೀರು ಆ ಕುಂಡಿಕೆಯಲ್ಲಿ ಹಿಂದೆ ಕಾಣಸಿಗುತ್ತಿತ್ತಂತೆ. ಈಗ ಪಕ್ಕದಲ್ಲಿದ್ದ ಬಂಡೆಗಳನ್ನು ನಾಶಪಡಿಸಿದ್ದರಿಂದ, ಅಲ್ಲದೆ ಅಲ್ಲಲ್ಲಿ ಬಾವಿ, ಬೋರ್‌ವೆಲ್‌ಗಳನ್ನು ತೋಡಿದ್ದರಿಂದ ಕುಂಡಿಕೆಯಲ್ಲಿ ನೀರಿನ ಪಸೆಯೂ ಇಲ್ಲ. ಬರಡಾಗಿ ತರಗೆಲೆಗಳಿಂದ ತುಂಬಿದ ಕುಂಡಿಕೆಯಷ್ಟೇ ಕಾಣಿಸುವುದು.

ಕಟ್ಟೆಲ ಮಂಗಳೂರಿನಿಂದ 25 ಕಿ. ಮೀ. ದೂರದಲ್ಲಿದೆ. ಮಂಗಳೂರಿನಿಂದ ಸಾಲೆತ್ತೂರಿಗೆ ಹೋಗುವ ವಾಹನದಲ್ಲಿ ಹೋಗಿ ಸಾಲೆತ್ತೂರಿನ ಸಿಂಡಿಕೇಟ್ ಬ್ಯಾಂಕ್ ನಿಲ್ದಾಣದಲ್ಲಿ ಇಳಿಯಬೇಕು. ಅಲ್ಲಿಂದ ಪಡಬದಿಗೆ ಹೋಗುವ ಮಣ್ಣಿನ ರಸ್ತೆಯಲ್ಲಿ 1 ಕಿ ಮೀ. ದೂರ ಹೋದಾಗ ಕಟ್ಟೆಲದ ಅದಮಾರು ಮಠ ಕಾಣಿಸುವುದು.

## ಉಜಿರೆಯ ಜನಾರ್ದನ ದೇವಾಲಯ:

ಸುಮಧ್ವವಿಜಯದಲ್ಲಿ 'ಉಚ್ಚಭೂತಿ'—ಎಂದು ಕರೆಯಲಾದ [16-41] ಉಜಿರೆಯ ಜನಾರ್ದನ ದೇವಾಲಯಕ್ಕೆ ಆಗಮಿಸಿದ ಆಚಾರ್ಯರು ಗರ್ವಿಷ್ಠರಾಗಿದ್ದ ಅಲ್ಲಿಯ ವಿದ್ವಾಂಸರ ಸೊಕ್ಕು ಮುರಿಯುವುದಕ್ಕಾಗಿ ಅವರನ್ನು ವಾದಕ್ಕೆ ಆಹ್ವಾನಿಸಿದರು. ಸನ್ಯಾಸಿಗಳಾದ ಶ್ರೀಮದಾಚಾರ್ಯರಿಗೆ ಯಜ್ಞಾನುಷ್ಠಾನದ ಪದ್ಧತಿ ಗೊತ್ತಿರಲಿಕ್ಕಿಲ್ಲ ಎಂದು ಭ್ರಮಿಸಿದ್ದ ಆ ವಿದ್ವಾಂಸರು ಒಂದು ಬ್ರಾಹ್ಮಣ-ಖಂಡದ ಅರ್ಥವನ್ನು ಕೇಳಿದರು. ಶ್ರೀಮದಾಚಾರ್ಯರು ಅದನ್ನು ವಿವರಿಸಿದರು. ಆ ಖಂಡಕ್ಕೆ ಅದು ಅರ್ಥ ಅಲ್ಲ ಎಂದು ವಾದಿಸಿದ ಆ ವಿದ್ವಾಂಸರಲ್ಲಿ ಹಾಗಾದರೆ ಆ ಖಂಡಕ್ಕೆ ಬೇರೆ ಅರ್ಥ ಯಾವುದು ಎಂದು ಆಚಾರ್ಯರು ಕೇಳಲು ಉತ್ತರಿಸಲು ಅಸಮರ್ಥರಾಗಿದ್ದ ಆ ವಿದ್ವಾಂಸರು ಪಲಾಯನ ಮಾಡಿದರು. ಅವರು ಪುನಃ ಆಚಾರ್ಯರಲ್ಲಿಗೆ ಬಂದು ಮತ್ತೊಂದು ಬ್ರಾಹ್ಮಣಖಂಡದ ಅರ್ಥವನ್ನು ಕೇಳಲು, ಅದನ್ನೂ ವಿವರಿಸಿದ ಆಚಾರ್ಯರು ಜಗತ್ತಿನಲ್ಲಿ ಅವುಗಳ ನಿರಂತರ ಪ್ರಸಾರಕ್ಕಾಗಿ ತಾವು ವಿವರಿಸಿದ್ದನ್ನೆಲ್ಲ ಬರೆಸಿದರು. ಹಾಗೆ ಬರೆಸಲ್ಪಟ್ಟದ್ದೇ 'ಖಂಡಾರ್ಥನಿರ್ಣಯ' [ಕರ್ಮನಿರ್ಣಯ] ಎಂಬ ಗ್ರಂಥರೂಪವನ್ನು ತಾಳಿದೆ.

ಹೀಗೆ ಶ್ರೀಮದಾಚಾರ್ಯರ 'ಖಂಡಾರ್ಥನಿರ್ಣಯ' ಗ್ರಂಥದ ರಚನೆಗೆ ತಾಣವಾದದ್ದು ಉಜಿರೆಯ ಜನಾರ್ದನ ದೇವಾಲಯ.

ಈಗ ಅಲ್ಲಿ 'ಖಂಡಾರ್ಥನಿರ್ಣಯ'ದ ರಚನೆಗೆ ಸಂಬಂಧಿಸಿದಂತೆ ಯಾವುದೇ ಸ್ಮಾರಕ ಉಳಿದಿಲ್ಲ. ಆದರೆ ಆಚಾರ್ಯರು ಆಸೀನರಾಗಿದ್ದು ಪುನೀತವಾದದ್ದೆಂದು ಹೇಳಲಾಗುವ ಒಂದು ಶಿಲೆಯ ಪೀಠವಷ್ಟೇ ಆ ದೇವಾಲಯಕ್ಕೆ ಆಚಾರ್ಯರ ಸಂಪರ್ಕವನ್ನು ಸಾರುತ್ತಿದೆ.

ಮಂಗಳೂರಿನಿಂದ ಬಿ.ಸಿ. ರೋಡಿನಲ್ಲಿ ಸಾಗಿ ಬಿ.ಸಿ. ರೋಡ್ ಬಸ್‌ಸ್ಟ್ಯಾಂಡಿನಿಂದ ಅರ್ಧ ಫರ್ಲಾಂಗ್ ಮುಂದೆ ಸಿಗುವ ಬೆಳ್ತಂಗಡಿ ರಸ್ತೆಯಲ್ಲಿ ಸಾಗಿ, ಬೆಳ್ತಂಗಡಿ ದಾಟಿ 5 ಕಿ. ಮೀ. ದೂರ ಹೋದಾಗ ಉಜಿರೆ ಪೇಟೆ ಸಿಗುವುದು. ಉಜಿರೆಪೇಟೆಯಲ್ಲಿ ವೃತ್ತ ಸಿಗುವುದು. ಅದರಿಂದ ನೇರವಾಗಿ ಹೋಗುವ ಚಾರ್ಮಾಡಿ ರಸ್ತೆಯಲ್ಲಿ ಕಾಲು ಫರ್ಲಾಂಗ್ ದೂರದಲ್ಲಿ ಎಡಗಡೆ ಜನಾರ್ದನ ದೇವಾಲಯ ಇದೆ.

**ಕಾಸರಗೋಡಿನ ಕಾವು ಮಠ :**

ಶ್ರೀಮದಾಚಾರ್ಯರ ಸಾಕ್ಷಾತ್ ಗೃಹಸ್ಥಶಿಷ್ಯರಾಗಿದ್ದ ತ್ರಿವಿಕ್ರಮ ಪಂಡಿತರು, ಅವರ ಸುಪುತ್ರ ನಾರಾಯಣ ಪಂಡಿತರು ಹಾಗೂ ಅವರ ವಂಶದ ವಾಮನ ಪಂಡಿತರೇ ಮುಂತಾದ ಮಹನೀಯರು ವಾಸಿಸುತ್ತಿದ್ದು, ನಡೆಸಿದ್ದ ಗ್ರಂಥರಚನೆಯೇ ಮುಂತಾದ ಸಾಧನೆಗಳಿಗೆ ತಾಣ ಆಗಿರುವ ಕಾವುಮಠದಲ್ಲಿ ಶ್ರೀಮದಾಚಾರ್ಯರು ಅರ್ಚಿಸಿ ತ್ರಿವಿಕ್ರಮಪಂಡಿತರಿಗೆ ಅನುಗ್ರಹಿಸಿದ್ದ ಶ್ರೀವತ್ಸ-ನಾರಾಯಣಮೂರ್ತಿ ಈಗಲೂ ವಿರಾಜಿಸುತ್ತಿದೆ. ಕಾವುಮಠಕ್ಕಿಂತ ½ ಫರ್ಲಾಂಗ್ ದೂರದಲ್ಲಿ ಆಗ್ನೇಯ ದಿಕ್ಕಿನಲ್ಲಿ ಪುಷ್ಕರಿಣಿಯ ತೀರದಲ್ಲಿ ತ್ರಿವಿಕ್ರಮ ಪಂಡಿತರದ್ದು ಎನ್ನಲಾಗುವ ವೃಂದಾವನವೂ (?) ಮಠಕ್ಕೆ ತಾಗಿಕೊಂಡೇ ಉತ್ತರದಿಕ್ಕಿನಲ್ಲಿ ನಾರಾಯಣಪಂಡಿತರದ್ದು ಎನ್ನಲಾಗುವ ವೃಂದಾವನವೂ (?) ಇದೆ.

ಅದರ ಹೊರವಲಯದಲ್ಲಿ (ಕೂಡ್ಲು) ಪುಂಡರೀಕ ಪುರಿ, ಪದ್ಮತೀರ್ಥ ಮುಂತಾದವರ ಜೊತೆ ನಡೆದ ವಾದದಲ್ಲಿ ಗಳಿಸಿದ ಜಯದ ಸ್ಮಾರಕವಾಗಿ ಕಾವು ಮಠದ ಎದುರು ಸ್ತೂಪದಂತೆ ರಚಿಸಿ, ಅದರ ಎದುರು 'ಜಯಪತಾಕೆ'ಯನ್ನು ಕೆತ್ತಿಸಲಾಗಿದೆ.

ಸುಮಧ್ವವಿಜಯದಲ್ಲಿ 'ಸ್ವಾರಾಮ' ಎಂದು ಉಲ್ಲೇಖಿಸಲಾದ [12–54] ಇದನ್ನು ಅಪಭ್ರಷ್ಟ ಭಾಷೆಯಲ್ಲಿ 'ಕಾವು' ಎಂದು ಕರೆಯಲಾಗುವುದೆಂದು ಭಾವ ಪ್ರಕಾಶಿಕಾದಲ್ಲಿ ತಿಳಿಸಲಾಗಿದೆ.

ಮಂಗಳೂರಿನಿಂದ 45 ಕಿ.ಮೀ. ದೂರದಲ್ಲಿರುವ ಕಾವುಮಠ ಕಾಸರಗೋಡಿಗೆ 2 ಕಿ. ಮೀ. ದೂರದಲ್ಲಿದೆ. ಮಂಗಳೂರಿನಿಂದ ಕಾಸರಗೋಡಿಗೆ ಹೋಗುವ

ದಾರಿಯಲ್ಲಿ 'ಚೌಕಿ' ನಿಲ್ದಾಣದಲ್ಲಿ ಇಳಿದು ಒಂದು ಫರ್ಲಾಂಗಿನಷ್ಟು ಮುಂದಕ್ಕೆ ಹೋಗಿ ಎಡಕ್ಕೆ ಸಾಗುವ ತೆಂಗಿನ ತೋಟದ ನಡುವಿನ ಮಣ್ಣಿನ ದಾರಿಯಲ್ಲಿ ಅರ್ಧ ಫರ್ಲಾಂಗಿನಷ್ಟು ನಡೆದರೆ ಕಾವು ಮಠ ಕಾಣಸುವುದು.

ವಿಳಾಸ:—ಕೆ. ವಾಸುದೇವ ಭಟ್, ಕಾವು ಮಠ, ಕೂಡ್ಲು ಅಂಚೆ,
ಕಾಸರಗೋಡು: 671124, ದೂರವಾಣಿ: 21965,

**ಕೂಡ್ಲು :**

ಪುಂಡರೀಕಪುರಿ, ಪದ್ಮತೀರ್ಥ ಮುಂತಾದ ದುರ್ವಾದಿಗಳ ಜೊತೆ ಶ್ರೀಮದಾಚಾರ್ಯರು ವಾಕ್ಯಾರ್ಥ ನಡೆಸಿ, ಅವರನ್ನು ಸೋಲಿಸಿದ ಸ್ಥಳವೆಂದು ಪ್ರತೀತಿ.

ಕಾವುಮಠಕ್ಕಿಂತ ಅರ್ಧ ಫರ್ಲಾಂಗ್ ದೂರದಲ್ಲಿ ಇರುವ ಅರಳೀಕಟ್ಟೆ ಕೂಡ್ಲು ಎನಿಸಿದೆ. ಇದರ ಎದುರು ಭಾಗದಲ್ಲಿಯೇ ಶ್ರೀ ವಿಷ್ಣುಮೂರ್ತಿ ದೇವಾಲಯವಿದೆ.

**ಮಧೂರಿನ ಮದನೇಶ್ವರ ದೇವಾಲಯ :**

ತಮ್ಮಲ್ಲಿಗೆ ಬರುವಂತೆ ಪ್ರಾರ್ಥಿಸಿಕೊಂಡಿದ್ದ ಜಯಸಿಂಹ ರಾಜನ ಪಟ್ಟಣಕ್ಕೆ ಹೋಗಲು ತೊಡಗಿದ್ದ ಶ್ರೀಮದಾಚಾರ್ಯರು ಕಾಸರಗೋಡಿನ ಮದನೇಶ್ವರ ದೇವಾಲಯುವನ್ನು ಪ್ರವೇಶಿಸಿದರು. ಸುಮಧ್ವವಿಜಯದಲ್ಲಿ [13–9] ಕಾಸರಗೋಡು 'ಸ್ತಂಭಪದೋಪಸರ್ಜನಾಖ್ಯ'—ಎಂದೂ, ಅಪಭ್ರಷ್ಟ ಭಾಷೆಯಲ್ಲಿ 'ಕಬೇನಾಡ್' ಎಂದು ಭಾವಪ್ರಕಾಶಿಕಾದಲ್ಲಿಯೂ ನಮೂದಿಸಲ್ಪಟ್ಟಿದೆ. ಒಂದು ರಾತ್ರಿ ಆ ಮದನೇಶ್ವರ ದೇವಾಲಯದಲ್ಲಿಯೇ ಇದ್ದು, ಬೆಳಗ್ಗಿನ ಆಹ್ನೀಕಗಳನ್ನೆಲ್ಲ ಅಲ್ಲಿಯೇ ಪೂರೈಸಿ ಅಲ್ಲಿಂದ ಆಚಾರ್ಯರು ಹೊರಟಿದ್ದರು. ಒಬ್ಬ ಶಿಷ್ಯನಿಂದ ಬಾರಿಸಲ್ಪಟ್ಟ ಘಂಟೆಯ ನಾದದಿಂದ ಶ್ರೀಮದನೇಶ್ವರನ ಅನುಮತಿ ದೊರಕಿತೆಂದು ಭಾವಿಸಿ, ಹೊರಟಿದ್ದ ಶ್ರೀಮದಾಚಾರ್ಯರನ್ನು ಕರೆದೊಯ್ಯಲು ಜಯಸಿಂಹರಾಜ ಅಲ್ಲಿಗೇ ಬಂದಿದ್ದ. ಬ್ರಹ್ಮಚಾರಿಗಳು, ಗೃಹಸ್ಥರು, ಸಂನ್ಯಾಸಿಗಳು ಹೀಗೆ ಅನೇಕ ಪರಿವಾರದವರ ಜೊತೆಗೆ ಜಯಸಿಂಹರಾಜನಿಂದ ವಿನಯ ಪೂರ್ವಕವಾಗಿ ಹಿಂಬಾಲಿಸಲ್ಪಡುತ್ತಿದ್ದ ಶ್ರೀಮದಾಚಾರ್ಯರು ವಿಷ್ಣುಮಂಗಲದ ದೇವಾಲಯುವನ್ನು ಪ್ರವೇಶಿಸಿದರು. [ಸು. 13–3, 9....23]

ಮಂಗಳೂರಿನಿಂದ ಕಾಸರಗೋಡಿಗೆ ಹೋಗುವ ರಸ್ತೆಯಲ್ಲಿ ಸುಮಾರು 50 ಕಿ. ಮೀ. ದೂರ ಸಾಗಿದಾಗ, ಎಡಬದಿಯಲ್ಲಿ ಮಧೂರಿಗೆ ಹೋಗುವ ರಸ್ತೆಯಲ್ಲಿ ಫಲಕ ಕಾಣಸುವುದು. ಅಲ್ಲಿಂದ 2½ ಕಿ. ಮೀ. ದೂರ ಹೋದಾಗ ಸಿಗುವ

ಕವಲು ದಾರಿಯಲ್ಲಿ ನೇರ ಮಾರ್ಗದಲ್ಲಿ ಸುಮಾರು 2 ಕಿ. ಮೀ. ದೂರ ಮುಂದು ವರಿಯಬೇಕು. ಎಡಕ್ಕೆ ಹೊರಳಬಾರದು.

ವಿಳಾಸ:—ಶ್ರೀ ಮದನಂತೇಶ್ವರ ಸಿದ್ಧಿವಿನಾಯಕ ದೇವಸ್ಥಾನ, ಮಧೂರು ಪೋಸ್ಟ್, ವಯಾ ಕೂಡ್ಲು, ಕಾಸರಗೋಡು.

**ವಿಷ್ಣುಮಂಗಲದ ವಿಷ್ಣುಮೂರ್ತಿ ದೇವಾಲಯ :**

ದಕ್ಷಿಣ ದಿಗ್ವಿಜಯಕ್ಕೆ ಹೊರಟಿದ್ದ ಶ್ರೀಮದಾಚಾರ್ಯರು ವಿಷ್ಣುಮಂಗಲ ಎನಿಸುವ ಈ ಕ್ಷೇತ್ರಕ್ಕೆ ಅಧಿಪತಿಯಾಗಿದ್ದ ಮಹಾವಿಷ್ಣುವಿನ ದೇವಾಲಯಕ್ಕೆ ಪ್ರವೇಶಿಸಿ, ಅಲ್ಲಿಯ ಮಹಾವಿಷ್ಣುವನ್ನು ನಮಸ್ಕರಿಸಿದ್ದರು. ಇಲ್ಲಿ ಶ್ರೀಮದಾ-ಚಾರ್ಯರಿಗೆ ಭಿಕ್ಷೆ ಮಾಡಿಸಿದ ಗೃಹಸ್ಥನು ಅವರ ಸಾಮರ್ಥ್ಯವನ್ನು ಪರೀಕ್ಷಿಸಲು ಮತ್ತೆ ಮತ್ತೆ ಕೊಟ್ಟ ಬಾಳೆಹಣ್ಣುಗಳ ರಾಶಿಯನ್ನು ಶ್ರೀಮದಾಚಾರ್ಯರು ಅನಾ ಯಾಸವಾಗಿ ಭಕ್ಷಿಸಿದ್ದರು. ಅದರ ಬಗ್ಗೆ ಆಶ್ಚರ್ಯಚಕಿತರಾಗಿ ವಿಚಾರಿಸಿದ ಗುರುಗಳಿಗೆ ತಮ್ಮ ಜಠರದಲ್ಲಿ ಹೆಬ್ಬೆರಳ ಗಾತ್ರದ ಬೆಂಕಿಯೊಂದು ಸದಾ ಉರಿಯು ತ್ತಿದೆ; ಅದು ತಮಗೆ ಸರ್ವದಾ ಹಿತಕರವೂ, ಪ್ರಲಯ ಕಾಲದಲ್ಲಿ ಜಗತ್ತನ್ನೇ ಸುಟ್ಟು ಹಾಕುವಷ್ಟು ಸಮರ್ಥ್ಯವೂ ಆದುದು ಎಂದು ತಿಳಿಸುವರು. [ಸು. ವಿ. 5-30....33]

ಶ್ರೀಮದಾಚಾರ್ಯರಿಗೂ ತ್ರಿವಿಕ್ರಮಪಂಡಿತರಿಗೂ ಹದಿನೈದುದಿನವಾಕ್ಯಾರ್ಥ ನಡೆದು, ಅನಂತರ ತ್ರಿವಿಕ್ರಮ ಪಂಡಿತರು ಶ್ರೀಮದಾಚಾರ್ಯರ ಶಿಷ್ಯತ್ವವನ್ನು ವಹಿಸಿಕೊಂಡದ್ದು ಈ ದೇವಾಲಯದಲ್ಲಿಯೇ. ಬಳಿಕ ಶ್ರೀ ಮಧ್ವಾಚಾರ್ಯರು ಬ್ರಹ್ಮಸೂತ್ರ ಭಾಷ್ಯದ ಪ್ರವಚನವನ್ನೂ ತ್ರಿವಿಕ್ರಮ ಪಂಡಿತರು ಅದರ ಶ್ರವಣ ವನ್ನೂ ನಡೆಸಿರುವರು. ಬಳಿಕ ತ್ರಿವಿಕ್ರಮ ಪಂಡಿತರು ಶ್ರೀ ಮಧ್ವರ ಗ್ರಂಥಗಳ ವರ್ಣನೆ ನಡೆಸಿದ್ದರು-ತ್ರಿವಿಕ್ರಮ ಪಂಡಿತರ ನಿವೇದನೆಗನುಗುಣವಾಗಿ ಅನುವ್ಯಾಖ್ಯಾ ನದ ರಚನೆಯೂ ಇಲ್ಲಿಯೇ ನಡೆದಿದೆ. [ಸು. ವಿ. 15-1....90] ಸುಮಧ್ವ ವಿಜಯದಲ್ಲಿ ಈ ದೇವಾಲಯವನ್ನು 'ಅಮರಾಲಯ' ಎಂದು ಕರೆಯಲಾಗಿದೆ. ಅಪಭ್ರಷ್ಟ ಭಾಷೆಯಲ್ಲಿ ಈ ದೇವಾಲಯಕ್ಕೂ ಗ್ರಾಮಕ್ಕೂ 'ಕುಡಿಲ್' ಎಂಬ ಹೆಸರು.

ಹೀಗೆ ಶ್ರೀಮದಾಚಾರ್ಯರ ಜಗತ್ಸಂಹರ್ತೃತ್ವಸಾಮರ್ಥ್ಯದ ಪ್ರಕಟಣೆಗೆ ಆಸರೆಯಾದ, ತ್ರಿವಿಕ್ರಮ ಪಂಡಿತರಂತಹ ದೊಡ್ಡ ವ್ಯಕ್ತಿಗಳನ್ನು ಪರಿವರ್ತನೆ ಗೊಳಿಸಲು ಬೇಕಾದ ಮಣ್ಣಿನ ಗುಣವನ್ನು ಹೊಂದಿರುವ, ಅನುವ್ಯಾಖ್ಯಾನ ದಂತಹ ಉತ್ತಮ ಕೃತಿ ಹೊರಹೊಮ್ಮಲು ಆಧಾರವಾಗಿರುವ ವಿಷ್ಣುಮಂಗಲದ

ಈ ವಿಷ್ಣುಮೂರ್ತಿ ದೇವಾಲಯ ಅನೇಕ ದೃಷ್ಟಿಗಳಿಂದ ವೈಶಿಷ್ಟ್ಯಪೂರ್ಣವೆನಿಸಿದೆ.

ದೇವಾಲಯದ ಬಲಪಾರ್ಶ್ವದಲ್ಲಿ 'ಚಕ್ರತೀರ್ಥ' ಎಂಬ ಸರೋವರ ಇದೆ. ಬಹಳವಾಗಿ ಹೂಲು ತುಂಬಿರುವುದರಿಂದ ವೈಶಾಖ ಮಾಸದಲ್ಲಿ ಈ ಸರೋವರದಲ್ಲಿ ನೀರು ಇರುವುದಿಲ್ಲ ಮಳೆಗಾಲದಲ್ಲಿ ನೀರು ತುಂಬಿದ್ದಾಗ ಈ ಸರೋವರದಲ್ಲಿನ ನೀರು ಚಕ್ರದಂತೆ ತಿರುಗುವುದು. ಆದ್ದರಿಂದ ಇದಕ್ಕೆ ಚಕ್ರತೀರ್ಥ ಎಂದು ಹೆಸರು ಎಂದು ಅಲ್ಲಿಯ ಅಧಿಕಾರಿಗಳು ಹೇಳುವರು.

ಮಂಗಳೂರಿನಿಂದ ಕಾಸರಗೋಡಿಗೆ ಹೋಗುವ ರಸ್ತೆಯಲ್ಲಿ ಕಾಸರಗೋಡಿಗಿಂತ 3 ಕಿ.ಮೀ. ಮೊದಲು ಸಿಗುವ ಚೌಕಿ ನಿಲ್ದಾಣದಲ್ಲಿ ಇಳಿದು, ಮಧೂರ್ ರಸ್ತೆಯಲ್ಲಿ ಸುಮಾರು 2 ಕಿ.ಮೀ. ಹೋದಾಗ ಅಜಾದ್ ನಗರ ಸಿಗುವುದು. ಅಲ್ಲಿ ಬಲಬದಿಯ ಮಣ್ಣಿನ ಮಾರ್ಗದಲ್ಲಿ ಕಾಲು ಫರ್ಲಾಂಗ್ ಸಾಗಿದಾಗ ವಿಷ್ಣುಮಂಗಲ ದೇವಸ್ಥಾನ ಕಾಣಸುವುದು.

ಮತ್ತೊಂದು ದಾರಿ : ಕಾಸರಗೋಡಿನಿಂದ ಮಧೂರ್ ರಸ್ತೆಯಲ್ಲಿ 3 ಕಿ.ಮೀ. ದಾಟಿದಾಗ ರಾಮದಾಸ ನಗರದ ಬಸ್‌ಸ್ಟಾಪ್ ಸಿಗುವುದು. ಅಲ್ಲಿಂದ ಪಶ್ಚಿಮ ದಿಕ್ಕಿಗೆ ಹೋಗುವ ಮಾರ್ಗದಲ್ಲಿ ಸುಮಾರು 4 ಫರ್ಲಾಂಗ್ ಹೋದಾಗ ಗೋಪಾಲಕೃಷ್ಣ ದೇವಾಲಯದ ಬಳಿ ವಿಷ್ಣುಮಂಗಲ ದೇವಸ್ಥಾನ ಸಿಗುವುದು.

ವಿಳಾಸ: ಶ್ರೀ ಮಹಾವಿಷ್ಣು ದೇವಸ್ಥಾನ, ವಿಷ್ಣುಮಂಗಲ, ರಾಮದಾಸ ನಗರ ಪೋಸ್ಟ್, ಕೂಡ್ಲು, ಕಾಸರಗೋಡು—671124

**ಕಣ್ವತೀರ್ಥದ ಕಣ್ವ ಮಠ:**

ಸುಮಧ್ವವಿಜಯದಲ್ಲಿ [15-140] 'ಸನ್ಮಠ' ಎಂದು ಉಲ್ಲೇಖಿಸಲಾಗುವ ಇದು ಅಪಭ್ರಷ್ಟ ಭಾಷೆಯಲ್ಲಿ 'ಕಾಂತ್ಯ' ಎಂದು ಕರೆಸಿಕೊಳ್ಳಲ್ಪಡುವುದೆಂದು ಭಾವಪ್ರಕಾಶಿಕಾದಲ್ಲಿ ತಿಳಿಸಲಾಗಿದೆ.

ಒಮ್ಮೆ ಸೂರ್ಯಗ್ರಹಣ ಕಾಲದಲ್ಲಿ ಶಿಷ್ಯಸಹಿತರಾದ ಶ್ರೀಮದಾಚಾರ್ಯರು ಈ ಮಠದಲ್ಲಿರುವ ಸರೋವರದಲ್ಲಿ ಮಿಂದು ಪಕ್ಕದಲ್ಲಿರುವ ಸಮುದ್ರದಲ್ಲಿ ಮೀಯಲು ಹೋದರು. ಸಮುದ್ರದ ತೀರದಲ್ಲಿ ಐತರೇಯ ಶಾಖೆಯ ಸೂಕ್ತಗಳ ಕುರಿತು ಪ್ರವಚನ ನಡೆಸಿದರು. ಶ್ರೀಮದಾಚಾರ್ಯರ ಕಡೆಗಣ್ಣಿನ ನೋಟಕ್ಕೆ ಗುರಿಯಾದ ಸಮುದ್ರ ತನ್ನ ತೆರೆಗಳನ್ನೆಲ್ಲ ನಿಲ್ಲಿಸಿ ಕೆರೆಯಂತೆ ಆಯಿತು. [ಸು. ವಿ. 16—10....23]

ಉಡುಪಿ ಅಷ್ಟಮಠಗಳಲ್ಲಿ ಎರಡೆರಡು ಮಠಗಳನ್ನು ಸೇರಿಸಿ ನಡೆಸಲಾದ ದ್ವಂದ್ವಮಠದ ವ್ಯವಸ್ಥೆ ಕಣ್ವಮಠದ ಹಿಂದೆ ಇರುವ ಅಶ್ವತ್ಥಕಟ್ಟೆಯಲ್ಲಿ ಶ್ರೀಮದಾ

ಚಾರ್ಯರಿಂದ ರೂಪುಗೊಂಡದ್ದೆಂದು ಐತಿಹ್ಯ ಇದೆ.

ಆಚಾರ್ಯರು ಚಾತುರ್ಮಾಸ್ಯ ಕಾಲದಲ್ಲಿ ಪ್ರತಿನಿತ್ಯ ಅವಗಾಹನ ನಡೆಸಿದ್ದಿರ ಬಹುದಾದ, ಗ್ರಹಣಕಾಲದಲ್ಲಿ ಮಿಂದಿದ್ದರೆಂದು ಸ್ಪಷ್ಟವಾಗಿಯೇ ಉಲ್ಲೇಖಿಸ ಲ್ಪಟ್ಟಿರುವ ಸರೋವರ ಹಾಗೂ ದ್ವಂದ್ವ ಮಠದ ವ್ಯವಸ್ಥೆ ನಡೆದ ಸ್ಥಳ ಎನ್ನ ಲಾಗುವ ಅಶ್ವತ್ಥಕಟ್ಟೆ—ಇವೆರಡು ಈ ಮಠಕ್ಕೆ ಆಚಾರ್ಯರ ಸಂಪರ್ಕವನ್ನು ಸಾರುತ್ತಿವೆ.

ಉಡುಪಿಯಿಂದ 80 ಕಿ. ಮೀ. ಮಂಗಳೂರಿನಿಂದ 20 ಕಿ. ಮೀ. ದೂರ ದಲ್ಲಿರುವ ಕಣ್ವತೀರ್ಥ ಮಠಕ್ಕೆ ಮಂಗಳೂರಿನಿಂದ ತಲಪಾಡಿ ಬಸ್ಸಿನಲ್ಲಿ ಹೋಗಿ, ತಲಪಾಡಿ ನಿಲ್ದಾಣದಲ್ಲಿ ಇಳಿಯಬೇಕು. ಮುಂದಕ್ಕೆ ಕಾಸರಗೋಡಿಗೆ ಹೋಗುವ ಮಾರ್ಗದಲ್ಲಿ ಅರ್ಧ ಕಿ. ಮೀ. ದೂರ ಸಾಗಿದಾಗ ಬಲಬದಿಯಲ್ಲಿ ಕಣ್ವತೀರ್ಥದ ಸ್ವಾಗತಗೋಪುರ ಕಾಣಿಸುವುದು. ಅದನ್ನು ಹಾದು ನೇರವಾಗಿ $\frac{1}{8}$ ಕಿ. ಮೀ. ಹೋದಾಗ ರೈಲ್ವೆಕ್ರಾಸ್ ಸಿಗುವುದು. ಅದನ್ನು ದಾಟಿ ರೈಲ್ವೆ ಮಾರ್ಗದಲ್ಲಿಯೇ ಎಡಕ್ಕೆ ಸುಮಾರು 100 ಮೀ. ದಾಟಿದಾಗ ಅಶ್ವತ್ಥಕಟ್ಟೆ ಕಾಣಿಸುವುದು. ಅದರ ಹಿಂಬದಿಯಲ್ಲಿಯೇ ಕಣ್ವತೀರ್ಥಮಠ ಇದೆ.

ವಿಳಾಸ:—ರಾಜಗೋಪಾಲ ಭಟ್, ಕಣ್ವತೀರ್ಥ ಮಠ, ಕುಂಜತ್ತೂರು ಪೋಸ್ಟ್,
ವಯಾ ಮಂಜೇಶ್ವರ, ಕೇರಳ—670323



# ಫಲಶ್ರುತಿ

ಈ 'ಪಾವನ ಯಾತ್ರೆ' ನಡೆದ ಏಳು ದಿನಗಳ ಅವಧಿ ಏನೂ ಹೇಳಿಕೊಳ್ಳುವಂತಹ ದೊಡ್ಡ ಅವಧಿಯಲ್ಲ. ಈ ಯಾತ್ರೆಯಲ್ಲಿ ಒಟ್ಟು ಸಂಚರಿಸಿರುವ ಸುಮಾರು ೫೦೦ ಕಿ. ಮೀ. ದೂರವೂ ಉಲ್ಲೇಖಿಸುವಷ್ಟು ದೀರ್ಘವಾದುದಲ್ಲ. ನೂರು ವ್ಯಕ್ತಿಗಳು ಸೇರಿಕೊಂಡು ನಡೆಸಿರುವ ಈ ಯಾತ್ರೆಯಲ್ಲಿ ಪಾಲ್ಗೊಂಡ ಯಾತ್ರಿಕರ ಸಂಖ್ಯೆಯೂ ನಮೂದಿಸುವಷ್ಟು ಬೃಹತ್ತಾದುದಲ್ಲ. ಯಾತ್ರೆಯಲ್ಲಿ ಸಂದರ್ಶಿಸಿರುವ ೨೫ ಸ್ಥಳಗಳೂ ಪುರಾಣಾದಿಗಳಲ್ಲಿ ಉಲ್ಲೇಖಿಸಲ್ಪಟ್ಟಷ್ಟು ಪ್ರಸಿದ್ಧವಾದವುಗಳಲ್ಲ.

ಆದರೂ ನೂರಾರು ವ್ಯಕ್ತಿಗಳು ಕಲೆತು, ತಿಂಗಳುಗಟ್ಟಲೆ ಸಾವಿರಾರು ಮೈಲಿ ದೂರದ ಪುರಾಣಪ್ರಸಿದ್ಧಗಳಾದ ಹತ್ತಾರು ಪುಣ್ಯ ಕ್ಷೇತ್ರಗಳಿಗೆ ನಡೆಸುವ ಯಾತ್ರೆಗಿಂತಲೂ ಈ ಯಾತ್ರೆ ಅನೇಕ ದೃಷ್ಟಿಗಳಿಂದ ವೈಶಿಷ್ಟ್ಯಪೂರ್ಣವಾಗಿದ್ದು, ಅನೇಕ ಬಗೆಯ ಪರಿಣಾಮಗಳಿಗೆ, ಫಲಗಳಿಗೆ ಪ್ರಯೋಜಕವಾಗಿದೆ. ಅಭೂತಪೂರ್ವವಾಗಿ ನಡೆಸಲಾದ ಈ ಯಾತ್ರೆ, ಸಂದರ್ಶನ ಯಾವ ಯಾವ ನಿಟ್ಟಿನಲ್ಲಿ ಹೇಗೆ ಹೇಗೆ ಪ್ರಭಾವ ಬೀರಿದೆ? ಎಷ್ಟರಮಟ್ಟಿಗೆ ಫಲಿಸಿದೆ? ಎಂಬುದಾಗಿ ಯಾತ್ರೆಯ 'ಫಲಶ್ರುತಿ'ಯನ್ನು ಹೀಗೆ ವಿವೇಚಿಸಬಹುದಾಗಿದೆ—

**ಪುಣ್ಯ ಸಂಪಾದನೆ :**

ಶ್ರೀ ಪ್ರಭಂಜನಾಚಾರ್ಯರು ತಮ್ಮ ಪ್ರವಚನಗಳಲ್ಲಿ ಅಲ್ಲಲ್ಲಿ ಒತ್ತಿ ಹೇಳುತ್ತಿದ್ದಂತೆ ಇದೊಂದು 'ಪಾವನಯಾತ್ರೆ'. ಪವನ ಎನಿಸಿರುವ ವಾಯುದೇವನ ಅವತಾರರಾದ ಶ್ರೀ ಮಧ್ವರ ಸಂಪರ್ಕಕ್ಕೊಳಗಾಗಿದ್ದ ಪ್ರದೇಶಗಳಿಗೆ ನಡೆಸಲಾದ ಯಾತ್ರೆಯಾಗಿದ್ದುದರಿಂದ 'ಪಾವನಯಾತ್ರೆ' ಎನಿಸಿದ್ದುದಲ್ಲದೆ, 'ಮಧ್ವರಾಯರ ಸ್ಮರಣೆ ಕುಲಕೋಟಿ ಉದ್ಧರಣೆ'—ಎಂದು ದಾಸರಾಯರು ಹೊಗಳಿರುವಂತೆ ಕುಲಕೋಟಿ ಉದ್ಧಾರಕ್ಕೆ ಬೇಕಾಗುವಷ್ಟು ಪುಣ್ಯಕ್ಕೆ ಕಾರಣವಾದ ಶ್ರೀ ಮಧ್ವರಾಯರ ಸ್ಮರಣೆಯನ್ನು ಹೆಜ್ಜೆ ಹೆಜ್ಜೆಗೆ ಉಂಟುಮಾಡುತ್ತಿದ್ದ ಈ ಯಾತ್ರೆ ತುಂಬ ಪುಣ್ಯಪ್ರದವಾದುದರಿಂದಲೂ 'ಪಾವನಯಾತ್ರೆ' ಎನಿಸಿದೆ.

'ಗಂಗೆ ಮುಂತಾದ ನದಿಗಳು ಜಡವಾದವು. ಶ್ರೀ ಮಧ್ವರು ಚೇತನರಾದ ತೀರ್ಥರು. ಆದ್ದರಿಂದ ಜಡತೀರ್ಥಗಳಿಗೆ ಮೂಲಸ್ಥಾನವಾದ 'ಹಿಮಾಲಯ'ಕ್ಕಿಂತಲೂ ಚೇತನತೀರ್ಥರಾದ ಶ್ರೀ ಅವತಾರಭೂಮಿ ಎನಿಸಿರುವ ಪಾಜಕಕ್ಷೇತ್ರ

ಅತ್ಯಂತ ಪವಿತ್ರವಾದುದು" ಎಂದು ಹೇಳಿರುವ ಶ್ರೀ ಹೃಷೀಕೇಶತೀರ್ಥರ ಮಾತಿನ[1] ಪ್ರಕಾರ ಶ್ರೀ ಮಧ್ವರು ನಲಿದಾಡಿದ, ಸಂಚರಿಸಿದ ನೆಲದ, ಉಸಿರಾಡಿದ ಗಾಳಿಯ ಮಿಂದ ಜಲದ ಸಂಪರ್ಕವುಳ್ಳ ಪ್ರದೇಶಗಳು ಗಂಗಾದಿ ತೀರ್ಥಗಳ ಸನ್ನಿಧಾನವುಳ್ಳ ಕ್ಷೇತ್ರಗಳಿಗಿಂತಲೂ ಮಿಗಿಲಾದವು. ಆದ್ದರಿಂದ ಅಂತಹ ಪ್ರದೇಶಗಳಿಗೆ ನಡೆಸಲಾದ ಈ ಯಾತ್ರೆ ಉಳಿದ ಪುಣ್ಯ ತೀರ್ಥಕ್ಷೇತ್ರಗಳ ಯಾತ್ರೆಗಿಂತಲೂ ಒಂದು ದೃಷ್ಟಿಯಲ್ಲಿ ಅಧಿಕ ಪುಣ್ಯಪ್ರದ.

**ಭಕ್ತಿ ಜ್ಞಾನಗಳ ಜಾಗೃತಿ:**

ಶ್ರೀ ಪೇಜಾವರ ಶ್ರೀಗಳವರು ಅಭಿಪ್ರಾಯಪಟ್ಟಂತೆ ಈ ಯಾತ್ರೆಯಿಂದಾಗಿ ಸುಮಧ್ವವಿಜಯದ ಪ್ರಾಯೋಗಿಕ ಪಾಠ ನಡೆದಂತಾಗಿದೆ. ಎಲ್ಲೆಲ್ಲಿ ಯಾವ ಯಾವ ಘಟನೆ ನಡೆದಿದೆ ಎಂದು ಸುಮಧ್ವವಿಜಯದಲ್ಲಿ ಉಲ್ಲೇಖಿಸಲ್ಪಟ್ಟಿದೆಯೋ ಅಲ್ಲಲ್ಲಿಗೇ ಹೋಗಿ ಅಲ್ಲಿ ನಡೆದಿದ್ದ ಘಟನೆಯ ಬಗ್ಗೆ ಶ್ರವಣ ಮನನಾದಿಗಳನ್ನು ನಡೆಸಿದ್ದಾಗಿದೆ. ಶ್ರೀ ಪ್ರಭಂಜನಾಚಾರ್ಯರು ತಿಳಿಸಿದಂತೆ 'ಅಲ್ಲಿ ಆ ಘಟನೆ ನಡೆಯಿತು; ಈ ಘಟನೆ ನಡೆಯಿತು' ಎಂದು ಬೇರೆಡೆ ನಡೆಸಬೇಕಾಗಿದ್ದ ಸುಮಧ್ವ ವಿಜಯದ ಪಾಠವನ್ನು ಈ ಯಾತ್ರೆಯ ಸಂದರ್ಭದಲ್ಲಿ 'ಇಲ್ಲಿ ಈ ಘಟನೆ ನಡೆದಿತ್ತು; ಇಲ್ಲಿ ಈ ಘಟನೆ ನಡೆದಿತ್ತು' ಎಂದು ಪ್ರಾದೇಶಿಕ ಸಾಮೀಪ್ಯದೊಂದಿಗೆ ಪ್ರಭಾವಕಾರಿಯಾಗಿ ನಡೆಸಿದಂತಾಗಿದೆ. ಆಯಾ ಪ್ರದೇಶದಲ್ಲಿಯೇ ಇದ್ದುಕೊಂಡು ಏಳ್ನೂರೈವತ್ತು ವರ್ಷಗಳ ಹಿಂದೆ ಸಂಭವಿಸಿದ್ದ ಘಟನೆಗಳನ್ನು ಚಿತ್ರಿಸಿಕೊಳ್ಳಲು ಅನುಕೂಲವಾಗುತ್ತಿತ್ತು.

ಏಳು ದಿನಗಳಲ್ಲಿ ಹದಿನಾರು ಸರ್ಗಗಳ ಸುಮಧ್ವವಿಜಯದ ಸಮಗ್ರ ಪ್ರವಚನ ವಲ್ಲದಿದ್ದರೂ ದಕ್ಷಿಣ ಕನ್ನಡ ಜಿಲ್ಲೆಯ ಆಯಾ ಪ್ರದೇಶದ, ದೇವಸ್ಥಾನದ ಉಲ್ಲೇಖವುಳ್ಳ ಸುಮಧ್ವವಿಜಯದ ಎರಡನೆಯ, ಮೂರನೆಯ, ನಾಲ್ಕನೆಯ, ಐದನೆಯ, ಆರನೆಯ, ಒಂಭತ್ತನೆಯ, ಹದಿಮೂರನೆಯ, ಹದಿನಾಲ್ಕನೆಯ, ಹದಿನೈದನೆಯ ಹಾಗೂ ಹದಿನಾರನೆಯ ಸರ್ಗಗಳಿಗೆ ಸಂಬಂಧಪಟ್ಟ ಅನೇಕ ಪದ್ಯಗಳ ಕುರಿತ ಪ್ರವಚನ ನಡೆದಿದೆ.

ಇದರಿಂದಾಗಿ ಸುಮಧ್ವವಿಜಯದ ಪಾರಾಯಣವನ್ನು ನಡೆಸುವಾಗ ಆಯಾ ಸ್ಥಳದ, ದೇವಾಲಯದ ಚಿತ್ರಣವನ್ನು ಕಣ್ಣೆದುರು ತಂದುಕೊಂಡು ಹೆಚ್ಚು ಏಕಾ

---

1) ಜಡಸ್ಯ ಗಂಗಾದ್ಯಭಿಧಸ್ಯ ಕೇವಲಂ ತೀರ್ಥಸ್ಯ ಮೂಲಂ ಹಿಮವನ್ನಗಾಧಿಪಃ ।
ಮತ್ ಸೌಖ್ಯತೀರ್ಥಸ್ಯ ಜಡೇತರಸ್ಯ ವೈ ಮೂಲಂ ಪವಿತ್ರಂ ತದತೀವ ಪಾಜಕಮ್ ॥
— ಸಂಪ್ರದಾಯಪದ್ಧತಿ

ಗ್ರತೆಯನ್ನು ತಾಳಬಹುದಾಗಿದೆ.

ಶ್ರೀ ವಿದ್ಯಾಧೀಶ ತೀರ್ಥರು ನಡೆಸಿದ 'ಯಮಕಭಾರತ'ದ ಪಾಠ ಮೂರು ನಾಲ್ಕು ಶ್ಲೋಕಗಳಿಗಷ್ಟೇ ಸೀಮಿತವಾಗಿದ್ದರೂ ಯಮಕ ಭಾರತವನ್ನು ಪೂರ್ಣವಾಗಿ ಅಧ್ಯಯನ ಮಾಡಬೇಕೆಂಬ ಅಭಿರುಚಿಯನ್ನು ಜಿಜ್ಞಾಸುಗಳಲ್ಲಿ ಹುಟ್ಟಿಸುವುದರಲ್ಲಿ ಯಶಸ್ವಿಯಾಗಿದೆ.

ಏರ್ಕಿ ಮಠದಲ್ಲಿ, ಕೊಕ್ಕಡದ ಮಹಾಲಿಂಗೇಶ್ವರ ದೇವಾಲಯದಲ್ಲಿ 'ಶ್ರೀ ಕೃಷ್ಣಾಮೃತಮಹಾರ್ಣವ'ದ ಬಗ್ಗೆ ವಿಶೇಷವಾದ ಪ್ರವಚನ ನಡೆದಿದ್ದು, ಉಜಿರೆಯ ಜನಾರ್ದನ ದೇವಾಲಯದಲ್ಲಿ ಕರ್ಮನಿರ್ಣಯದ ಕುರಿತು ವಿಶೇಷವಾದ ಪ್ರವಚನ ನಡೆದಿದ್ದು—ಆ ಗ್ರಂಥಗಳ ಅಧ್ಯಯನದಲ್ಲಿ ವಿಶೇಷವಾದ ಆಸಕ್ತಿ ಮೂಡಿದಂತಾಗಿದೆ.

ಶ್ರೀ ವಿದ್ಯಾಮಾನ್ಯತೀರ್ಥರ ಹಾಗೂ ಶ್ರೀ ವಿಶ್ವೇಶತೀರ್ಥರ ಪ್ರವಚನಗಳು ಶ್ರೀ ಮಧ್ವರಲ್ಲಿ ಗೌರವ ಭಾವನೆಯನ್ನು ಹೆಚ್ಚಿಸಿಕೊಳ್ಳುವುದಕ್ಕೂ, ಮಾಧ್ವತತ್ತ್ವಗಳಲ್ಲಿ ದಾರ್ಢ್ಯವನ್ನು ತಂದುಕೊಳ್ಳುವುದಕ್ಕೂ ಪ್ರಯೋಜಕಗಳಾಗಿವೆ.

ಏರಕೀಮಠದಲ್ಲಿ ದರ್ಶನಪಡೆದ ಆಚಾರ್ಯಕರಾರ್ಚಿತ ಶ್ರೀ ಭೂ ಸಹಿತನಾದ ಕೇಶವನ ಪ್ರತಿಮೆಯಿಂದ, ಕಾವು ಮಠದಲ್ಲಿ ದರ್ಶನ ಪಡೆದ ಆಚಾರ್ಯಕರಾರ್ಚಿತ ಶ್ರೀವತ್ಸನಾರಾಯಣನ ಪ್ರತಿಮೆಯಿಂದ ಆಯಾ ಮೂರ್ತಿಯನ್ನು ಧ್ಯಾನಿಸಿಕೊಳ್ಳಲು ಅನುಕೂಲವಾದಂತಾಗಿದೆ.

**ಸತ್ಸಂಗ :**

"ಸಂಸಾರೇಽಸ್ಮಿನ್ ಕ್ಷಣಾರ್ಧೋಽಪಿ ಸತ್ಸಂಗಃಶೇವಧಿರ್ನೃಣಾಮ್" ಎಂದು ಭಾಗವತ ತಿಳಿಸಿರುವಂತೆ ನಿಧಿಯಂತಿರುವ ಸತ್ಸಂಗ ಈ ಯಾತ್ರೆಯಲ್ಲಿ ವಿಶೇಷವಾಗಿ ದೊರಕಿದೆ. ಶ್ರೀಮದಾಚಾರ್ಯರ ಮೇಲಿನ ಗೌರವಭಾವನೆಗೆ ವಿಶೇಷವಾಗಿ ಒಳಗಾದ ನೂರು ಮಂದಿ ಸಹೃದಯರ ಒಡನಾಟ ಪರಸ್ಪರವಾಗಿ ಪ್ರಭಾವ ಬೀರುವಲ್ಲಿ ತುಂಬ ಪರಿಣಾಮಕಾರಿ. ಯಾತ್ರೆಯಲ್ಲಿ ಪಾಲ್ಗೊಂಡಿದ್ದ ವಿದ್ವಾಂಸರ, ಸಾಧಕರ, ಭಾವುಕರ ಆಚಾರ ವಿಚಾರಗಳು, ಶ್ರದ್ಧೆ ನಿಷ್ಠೆಗಳು ಅನ್ಯೋನ್ಯವಾಗಿ ಕೆಲವೊಮ್ಮೆ ಪ್ರೇರಕಗಳಾದರೆ ಮತ್ತೆ ಕೆಲವೊಮ್ಮೆ ಪೋಷಕಗಳೋ, ಸುಧಾರಕಗಳೋ ಆಗಬಲ್ಲವು.

ಶ್ರೀಪಾದರುಗಳೂ ಜೊತೆಗೆ ಇದ್ದರು. ಅವರಲ್ಲೂ ತಪೋವೃದ್ಧರೂ, ಜ್ಞಾನವೃದ್ಧರೂ ಆಗಿದ್ದು ಶ್ರೀಮದಾಚಾರ್ಯರ ಪ್ರತೀಕದಂತಿರುವ ಶ್ರೀ ವಿದ್ಯಾಮಾನ್ಯತೀರ್ಥರೂ ಇದ್ದರು. ಇವರ ಒಡನಾಟ ಪ್ರಾಯಶಃ ಇನ್ನು ಯಾವ ಯಾತ್ರಿಕರಿಗೂ ದೊರಕಲು ಸಾಧ್ಯವಿಲ್ಲ. ಇಂತಹ ಮಹನೀಯರು ನಡೆಸುತ್ತಿದ್ದ ಪೂಜೆ ಪುರಸ್ಕಾರಗಳು, ಜಪಾನುಷ್ಠಾನಗಳು, ಪ್ರವಚನಗಳು ಉಳಿದವರ ಮೇಲೆ

ಸಾಕಷ್ಟು ಪ್ರಭಾವ ಬೀರಿದ್ದವು.

**ಜನಸಾಮಾನ್ಯರ ಮೇಲೆ ಪ್ರಭಾವ:**

ಬೆಂಗಳೂರು, ದೆಹಲಿ, ಹುಬ್ಬಳ್ಳಿ, ಗುಲ್ಬರ್ಗ, ಮದ್ರಾಸ್ ಮುಂತಾದ ನಗರಗಳಲ್ಲಿ ದೊಡ್ಡ ದೊಡ್ಡ ಹುದ್ದೆಗಳಲ್ಲಿರುವ ಶ್ರದ್ಧಾಳುಗಳು ಸೇರಿಕೊಂಡು ನಡೆಸಿದ್ದ ಈ ಆಧ್ಯಾತ್ಮಿಕ ಯಾತ್ರೆ ಆಯಾ ಊರಿನ ಜನಸಾಮಾನ್ಯರ ಮೇಲೆಯೂ ಸಾಕಷ್ಟು ಪ್ರಭಾವ ಬೀರಿತ್ತು. ಆಗಿನ ಪ್ರಧಾನಿಗಳ ವಾರ್ತಾ ಸಲಹೆಗಾರರಾಗಿದ್ದ ಶ್ರೀ ಪಿ.ವಿ. ಆರ್. ಕೆ. ಪ್ರಸಾದ್ ಇವರೂ ಸಪತ್ನೀಕರಾಗಿ ಇದರಲ್ಲಿ ಪಾಲ್ಗೊಂಡಿದ್ದಾರೆಂದು ತಿಳಿದಾಗ ಇನ್ನಷ್ಟು ಕುತೂಹಲದಿಂದ, ಉತ್ಸಾಹದಿಂದ ಜನಸಾಮಾನ್ಯರು ತಾವೂ ಪ್ರವಚನಗಳಲ್ಲಿ ಶ್ರೋತೃಗಳಾಗಿ ಪಾಲ್ಗೊಳ್ಳುತ್ತಿದ್ದರು.

ಕೊಡವೂರು, ಕೋಡಿಪಾಡಿ, ಕೊಕ್ಕಡ ಹಾಗೂ ಉಜಿರೆ—ಈ ಪ್ರದೇಶಗಳಲ್ಲಿ ಸ್ಥಳೀಯ ಅಧಿಕಾರಿಗಳಿಂದ ಸಾರ್ವಜನಿಕ ಸಭೆ ಸಂಯೋಜಿಸಲ್ಪಟ್ಟಿದ್ದು, ಅದರಲ್ಲಿ ಪಾಲ್ಗೊಂಡಿದ್ದ ಸ್ಥಳೀಯ ಆಸ್ತಿಕರ ಕಿವಿಗೆ ಶ್ರೀ ಮಧ್ವರ ವ್ಯಕ್ತಿತ್ವದ, ಸಂದೇಶಗಳ ಉಪದೇಶ ತಲುಪುವಂತಾಗಿತ್ತು. ಕೊಕ್ಕಡ ಮುಂತಾದ ಕೆಲವೆಡೆ ಅಲ್ಲಿಯ ಅಧಿಕಾರಿಗಳು ಶ್ರೀ ಪ್ರಭಂಜನಾಚಾರ್ಯರ ಪ್ರವಚನದಿಂದ ಎಷ್ಟು ಪ್ರಭಾವಿತರಾಗಿದ್ದರೆಂದರೆ ಅವರು ತಮ್ಮ ದೇವಸ್ಥಾನದ ಉತ್ಸವ ಕಾಲದಲ್ಲಿ ಪ್ರಭಂಜನಾಚಾರ್ಯರ ಪ್ರವಚನ ನಡೆಯಬೇಕೆಂದು ಅಪೇಕ್ಷೆ ಪಟ್ಟಿರುವರು.

ಸಾರ್ವಜನಿಕ ಸಭೆ ನಡೆಯದಿದ್ದ ಉಳಿದ ಸ್ಥಳಗಳಲ್ಲಿಯೂ ಸಂದರ್ಶಕರ, ಯಾತ್ರಿಕರ ಶ್ರದ್ಧಾಪೂರ್ವಕಗಳಾದ ನಡೆನುಡಿಗಳು, ಆಚಾರ ವಿಚಾರಗಳು ಅಲ್ಲಲ್ಲಿಯ ಅರ್ಚಕರ ಮೇಲೆ, ಅಧಿಕಾರಿಗಳ ಮೇಲೆ ಸಾಕಷ್ಟು ಪ್ರಭಾವ ಬೀರಿದ್ದವು.

**ಹೊಸ ಮಾಹಿತಿ:**

ಎಲ್ಲೋ ಇದ್ದುಕೊಂಡು ಪುಸ್ತಕದಲ್ಲಿ ಬಂದ ಉಲ್ಲೇಖವನ್ನಷ್ಟೇ ಓದಿ ಸುಮ್ಮನಿರುವುದಕ್ಕಿಂತ ಆಯಾ ಪ್ರದೇಶಕ್ಕೇ ಹೋಗಿ ಅಲ್ಲಿಯ ಪರಿಸರವನ್ನು ಪರಿಶೀಲಿಸಿದ್ದರಿಂದ ಅಲ್ಲಿಯ ಅರ್ಚಕರಲ್ಲಿ, ಅಧಿಕಾರಿಗಳಲ್ಲಿ, ಊರ ಪ್ರಮುಖರಲ್ಲಿ ಆಯಾ ಪ್ರದೇಶಕ್ಕೆ ಆಚಾರ್ಯರ ಸಂಪರ್ಕದ ಬಗ್ಗೆ ವಿಚಾರವಿನಿಮಯ ನಡೆಸಿದ್ದರಿಂದ ಆಚಾರ್ಯರ ಚರಿತ್ರೆಗೆ ಸಂಬಂಧಿಸಿದ ಕೆಲವು ಅಪೂರ್ವ ಮಾಹಿತಿಗಳನ್ನು ಪಡೆದುಕೊಂಡಂತಾಗಿದೆ.

- ಅಡೂರಿನ ಮಹಾಲಿಂಗೇಶ್ವರ ದೇವಾಲಯದಲ್ಲಿ ಹಾಗೂ ಕೊಕ್ಕಡದ ವೈದ್ಯನಾಥ ದೇವಾಲಯದಲ್ಲಿ ಆಚಾರ್ಯರ ಮೂಲಕ ಪ್ರತಿಷ್ಠೆಗೊಂಡ ವಿಷ್ಣು ಮೂರ್ತಿಗಳಿವೆ.

● ಈ ವಿಷ್ಣುವಿನ ಪ್ರತಿಮೆಗಳು ಅಲ್ಲಿಯ ಅರ್ಚಕರು, ಅಧಿಕಾರಿಗಳು ಒಕ್ಕೊರಲಿನಿಂದ ಸಾರುವಂತೆ ಆಚಾರ್ಯರಿಂದಲೇ ಪ್ರತಿಷ್ಠಿತಗಳಾಗಿದ್ದಿರಬಹುದು. ಇಲ್ಲವೇ ಆಚಾರ್ಯರ ಮಾರ್ಗದರ್ಶನದಲ್ಲಿ ಮತ್ತಾರೋ ಅವರ ಶಿಷ್ಯರಿಂದ, ಭಕ್ತರಿಂದ ಪ್ರತಿಷ್ಠಿತಗಳಾಗಿದ್ದಿರಬಹುದು. ಇವೆರಡು ಅಲ್ಲದಿದ್ದರೂ ಆ ವಿಷ್ಣು ಪ್ರತಿಮೆಗಳ ಪ್ರತಿಷ್ಠಾಪನೆಯಲ್ಲಿ ಆಚಾರ್ಯರದ್ದು ಯಾವುದಾದರೊಂದು ಪಾತ್ರ ಇದ್ದೇ ಇದೆ ಎಂಬುದನ್ನಂತೂ ಒಪ್ಪದಿರಲಾಗದು.

● ಈಗ 'ಮುದ್ಯ' ಎಂದು ಕರೆಸಿಕೊಳ್ಳಲ್ಪಡುವ ಊರೇ 'ಪಾರಂತೀ' ಎಂದು ಸುಮಧ್ವವಿಜಯದಲ್ಲಿ ಉಲ್ಲೇಖಿಸಲ್ಪಟ್ಟಿದೆ. ಮುದ್ಯದ ಪಂಚಲಿಂಗೇಶ್ವರ ದೇವಾಲಯವೇ "ಪಾರಂತೀಸುರಸದನ" ಎಂದು ಉಲ್ಲೇಖಗೊಂಡು, ಇಲ್ಲಿರುವ ಪಂಚಲಿಂಗಗಳೇ ಪಾಂಡವರಿಂದ ವನವಾಸ ಕಾಲದಲ್ಲಿ ಪ್ರತಿಷ್ಠಾಪಿಸಲ್ಪಟ್ಟವುಗಳೆಂದು ನಿರೂಪಿಸಲ್ಪಟ್ಟಿವೆ. ಈ ಲಿಂಗಗಳು ಸಹಜವಾಗಿ ಅರಣ್ಯದಲ್ಲಿ ದೊರಕಿದ ಶಿಲೆಗಳಂತೆ ಇವೆಯೇ ಹೊರತು ಕಡೆದು ಮಾಡಿದ ಲಿಂಗಗಳಂತಿಲ್ಲ. ರುದ್ರನ ಪ್ರತಿಮೆಗಳೆನಿಸುವ ಲಿಂಗಗಳು ಸಾಮಾನ್ಯವಾಗಿ ಉದ್ದಗಳಾಗಿರುವವಾದರೆ, ಇಲ್ಲಿಯ ಲಿಂಗಗಳು ಬುಡದಲ್ಲಿ ದಪ್ಪಗಳಾಗಿದ್ದು, ಹೆಚ್ಚು ಉದ್ದಗಳಾಗಿರದೆ ಉಡುಪಿಯ ಅನಂತಾಸನ ದೇವಾಲಯ ಮುಂತಾದ ಕಡೆ ಇರುವಂತೆ ಶ್ರೀ ವಿಷ್ಣುವಿನ ಪಂಚರೂಪಗಳ ಪ್ರತಿಮೆಗಳಾಗಿರುವುದು ಸ್ಪಷ್ಟವಾಗಿದೆ. ಅಲ್ಲದೆ, ರುದ್ರದೇವಾಲಯಗಳಲ್ಲಿ ಸಾಮಾನ್ಯವಾಗಿ ಇರುವಂತೆ ನಂದಿಯ ವಿಗ್ರಹ, ಜಲದ್ರೋಣಿ ಇಲ್ಲಿ ಇದ್ದಿಲ್ಲ. ಒಂದೆರಡು ವರ್ಷಗಳ ಹಿಂದೆಯಷ್ಟೇ ಅರ್ಚಕರೇ ಅವನ್ನು ಸ್ಥಾಪಿಸಿರುವರಷ್ಟೇ. ದೇವಾಲಯದ ಸುತ್ತ ಬಲಿಗಲ್ಲುಗಳಿರದಿರುವುದು, ಅಷ್ಟಬಂಧಪೂರ್ವಕವಾಗಿ ಪ್ರತಿಷ್ಠಾಪಿಸದೆ ಇರುವುದು ಕೂಡಾ ಇದು ಆಗಮಶಾಸ್ತ್ರಕ್ಕನುಗುಣವಾಗಿ ರುದ್ರಲಿಂಗಗಳ ಪ್ರತಿಷ್ಠೆಯನ್ನೊಳಗೊಂಡ ದೇವಾಲಯ ಅಲ್ಲ ಎಂಬುದನ್ನು ಸಾರುತ್ತಿದೆ.

ಅಂತೂ ಮುದ್ಯದ ಪಂಚಲಿಂಗೇಶ್ವರ ದೇವಾಲಯದಲ್ಲಿ ಇರುವ ಪಂಚಲಿಂಗಗಳು 'ಪಂಚಲಿಂಗೇಶ್ವರ' ಎಂಬ ಹೆಸರಿಗೆ ಅನುಗುಣವಾಗಿ, ಹಾಗೆಯೇ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೆಚ್ಚಾಗಿ ಇರುವಂತೆ, ರುದ್ರನ ಪ್ರತೀಕಗಳೇನೋ ಎಂಬ ಭ್ರಮೆಗೆ ಅವಕಾಶ ಇದೆಯಾದರೂ ಅಲ್ಲಿಗೇ ಹೋಗಿ ಸೂಕ್ಷ್ಮವಾಗಿ ಪರಿಶೀಲಿಸಿದ್ದರಿಂದ 'ಪಂಚಾತ್ಮಾ ಮುರರಿಪುರಂಚಿತೋ ಯದತ್ರ ...'—ಎಂದು ಸುಮಧ್ವವಿಜಯದಲ್ಲಿ ಉಲ್ಲೇಖಿಸಲ್ಪಟ್ಟಂತೆ ಪಾಂಡವರಿಂದ ವನವಾಸಕಾಲದಲ್ಲಿ ಪ್ರತಿಷ್ಠಾಪಿಸಲ್ಪಟ್ಟು ಪೂಜಿಸಲ್ಪಟ್ಟಿದ್ದ ವಾಸುದೇವಾದಿ ಪಂಚರೂಪಿ ಭಗವಂತನ ಪ್ರತೀಕಗಳೆಂದು ಸ್ಪಷ್ಟವಾದಂತಾಗಿದೆ.

● ಕೊಕ್ಕಡದಲ್ಲಿ ಇರುವ ದೇವಾಲಯ ಮಹಾಲಿಂಗೇಶ್ವರನದ್ದು. ಆದರೆ

ಕೊಕ್ಕಡವನ್ನು 'ತ್ರಿಭುವನ ವೈದ್ಯನಾಥಂ' — ಎಂದು ಕರೆಯುವುದರ ಮೂಲಕ ತ್ರಿಭುವನಗಳಲ್ಲಿ ವೈದ್ಯನಾಥ ಧನ್ವಂತರಿಯೇ ಆ ದೇವಾಲಯದಲ್ಲಿ ಪೂಜ್ಯನಾದವನೆಂದು ಉಲ್ಲೇಖಿಸಲಾಗಿದೆ. ಇದಕ್ಕೆ ಕಾರಣ—ಅಲ್ಲಿರುವ ಮಹಾಲಿಂಗೇಶ್ವರನಲ್ಲಿ ಧನ್ವಂತರಿಯ ವಿಶೇಷಾವೇಶ. ಉಡುಪಿ ಅನಂತಾಸನ ದೇವಾಲಯದಲ್ಲಿಯ ರುದ್ರಲಿಂಗದಲ್ಲಿ ಅನಂತಾಸನನ ವಿಶೇಷಾವೇಶ ಹೇಗೋ ಹಾಗೆ. ಹೀಗೆ ಅಲ್ಲಿ ಅನಂತಾಸನನ ವಿಶೇಷಾವೇಶವಿರುವುದರಿಂದ ಅದು ಅನಂತಾಸನ ದೇವಾಲಯ ಎಂದು ಕರೆಸಿಕೊಳ್ಳಲ್ಪಡುವಂತೆ ಕೊಕ್ಕಡದಲ್ಲಿ ಧನ್ವಂತರಿಯ ವಿಶೇಷಾವೇಶ ಇರುವುದರಿಂದ ಈ ದೇವಾಲಯ ಧನ್ವಂತರಿಯ ದೇವಾಲಯ ಎಂದೇ ಉಲ್ಲೇಖಿಸಲ್ಪಟ್ಟಿದೆ.

● ಅಂತೆಯೇ ಕಾಂತಾವರದ ಕಾಂತೇಶ್ವರ ದೇವಾಲಯದಲ್ಲಿರುವ ಕಾಂತೇಶ್ವರನಲ್ಲಿ ನರಸಿಂಹನ ವಿಶೇಷಾವೇಶ ಇರುವುದರಿಂದ ಆ ದೇವಾಲಯ ನರಸಿಂಹ ದೇವಾಲಯ ಎಂದೂ ಉಲ್ಲೇಖಿಸಲ್ಪಟ್ಟಿದೆ. ಗಂಡವಾಟ ಮುಂತಾದ ಜಟ್ಟಿಗಳ ಜೊತೆಗೆ ಮಲ್ಲವಿದ್ಯೆಯ ಪರೀಕ್ಷೆ ನಡೆದ ಬಳಿಕ ಆಚಾರ್ಯರು ತಮ್ಮ ಲಘಿಮಾ ಸಿದ್ಧಿಯ ಸಾಮರ್ಥ್ಯವನ್ನು ತೋರಿಸಿಕೊಡುವುದಕ್ಕಾಗಿ ಒಬ್ಬ ವಟುವಿನ ಹೆಗಲೇರಿ ನರಸಿಂಹದೇವಾಲಯವನ್ನು ಪ್ರದಕ್ಷಿಣೆ ಬಂದರು ಎಂದು ಸುಮಧ್ವವಿಜಯದಲ್ಲಿ ನಮೂದಿಸಲ್ಪಿಟ್ಟ ನರಸಿಂಹದೇವಾಲಯವೆಂದರೆ ಕಾಂತಾವರದ ಕಾಂತೇಶ್ವರ ದೇವಾಲಯವೇ ಎಂದೂ ಸ್ಪಷ್ಟವಾದಂತಾಗಿದೆ. ಕಾಂತಾವರದ ಬಳಿ ಇನ್ನಾವುದೂ ನರಸಿಂಹ ದೇವಾಲಯವಿಲ್ಲ. ಪಕ್ಕದಲ್ಲಿಯೇ ಇರುವ ಪಲಿಮಾರು ಮಠದಲ್ಲಿ ಲಕ್ಷ್ಮೀನರಸಿಂಹನ ಪ್ರತೀಕವಿದೆಯಾದರೂ 'ನರಸಿಂಹಗೇಹ'—ಎಂದು ಉಲ್ಲೇಖಿಸುವಷ್ಟು, ವಟುವನ್ನು ಏರಿ ಪ್ರದಕ್ಷಿಣೆ ಬರುವಷ್ಟು ಅದು ವಿಶಾಲವಾಗಿಲ್ಲ. ಮಂಜೇಶ್ವರದಲ್ಲಿಯ ಒಂದು ನರಸಿಂಹ ದೇವಾಲಯದಲ್ಲಿ ಈ ಘಟನೆ ನಡೆದದ್ದೆಂದು ಕೆಲವರು ಹೇಳುವುದುಂಟು. ಆದರೆ ಕಾಂತಾವರದಲ್ಲಿ ನಡೆದ ಘಟನೆಯ ಅನಂತರದಲ್ಲಿಯೇ ನರಸಿಂಹ ದೇವಾಲಯದಲ್ಲಿ ನಡೆದ ಈ ಘಟನೆಯನ್ನು ನಿರೂಪಿಸಬೇಕೆಂದರೆ ಅದು ಕಾಂತಾವರದಲ್ಲಿ, ಅಥವಾ ಅದರ ಸಮೀಪದಲ್ಲಿ ಇರುವ ದೇವಾಲಯದಲ್ಲಿ ನಡೆದ ಘಟನೆ ಎಂಬುದೇ ಉಚಿತ ಹೊರತು ಕಾಂತಾವರದಿಂದ ಎಷ್ಟೋ ದೂರದಲ್ಲಿರುವ ಮಂಜೇಶ್ವರದ ನರಸಿಂಹ ದೇವಾಲಯದಲ್ಲಿ ನಡೆದ ಘಟನೆ ಎಂಬುದು ಉಚಿತವೆನಿಸದು.

● ಅಡೂರಿನ ಮಹಾಲಿಂಗೇಶ್ವರ ದೇವಾಲಯದ ಪರಿಸರದಲ್ಲಿ 'ಮೊಸರಾಳ ಸಭೆ'—ಎಂಬ ವಿದ್ವತ್‌ಸಭೆ ಇತ್ತೀಚಿನವರೆಗೂ ನಡೆಯುತ್ತಿತ್ತೆಂದು ಅಲ್ಲಿಯ ಸಂಬಂಧಪಟ್ಟ ವ್ಯಕ್ತಿಗಳಿಂದ ತಿಳಿದುಬಂದ ಪ್ರಯುಕ್ತ ಶ್ರೀಮದಾಚಾರ್ಯರ ಕಾಲದಲ್ಲಿ ವಿದ್ವಾಂಸರ ಸಭೆಯ ವಾತಾವರಣ ಅಲ್ಲಿ ಇತ್ತೆಂಬುದನ್ನು ದೃಢಪಡಿಸಿಕೊಳ್ಳು

ವಂತಾಗಿದೆ.

● ಏರ್ಕಿ ಮಠದ ಸರೋವರವನ್ನಷ್ಟೇ ಮಳೆ ಬರಿಸಿ ತುಂಬಿಸಿದ ಘಟನೆ ಮತ್ತೊಮ್ಮೆ ಇತ್ತೀಚಿಗೆ ಅಂದರೆ 1966ನೇ ಜೂನ್ 6ರಂದು ಭಾಗೀರಥಿ ಜನ್ಮ ದಿನದಂದೂ ನಡೆದಿದೆ. ಆಗ ವೈಶಾಖಮಾಸ. ಕೆರೆಯ ನೀರೆಲ್ಲ ಬತ್ತಿತ್ತು. ಸುಬ್ರಹ್ಮಣ್ಯ ಮಠದ ಹಿಂದಿನ ಶ್ರೀಪಾದರಾದ ಶ್ರೀ ಶ್ರೀ ವಿದ್ಯಾಸಿಂಧುತೀರ್ಥರು ಆ ಕೆರೆಯ ಆಳಿದುಳಿದಿದ್ದ ನೀರಲ್ಲಿ ದಂಡೋದಕ ನಡೆಸಿ ಭೋಜನ ಪೂರೈಸುವಷ್ಟ ರಲ್ಲಿ ಸುರಿದ ಮಳೆಯ ಧಾರೆಯ ನೀರಿಂದಲೇ ಕೈತೊಳೆಯುವಷ್ಟು ಅಧಿಕ ಪ್ರಮಾಣ ದಲ್ಲಿ ಮಳೆ ಸುರಿದು ಆ ತೀರ್ಥ ನೀರಿನಿಂದ ತುಂಬಿತ್ತು. ಸ್ವಾರಸ್ಯ ಅಂದರೆ ಅಂದು ಆಸುಪಾಸಿನ ಊರುಗಳಲ್ಲಿ ಮಳೆ ಬಂದಿರಲಿಲ್ಲ.

ಈ ಘಟನೆಯುನ್ನು ಕಣ್ಣಾರೆ ಕಂಡು ಅನುಭವಿಸಿದ ವ್ಯಕ್ತಿಗಳು ಈಗಲೂ ಇರುವರು. ಆವರ ಹೇಳಿಕೆಯಿಂದಾಗಿ ಆಚಾರ್ಯರ ಪೀಠದಲ್ಲಿ ಬಂದ ವ್ಯಕ್ತಿಗಳಿಗೇ ಇಷ್ಟೊಂದು ಸಾಮರ್ಥ್ಯವಿದೆ ಎಂದ ಮೇಲೆ ಆಚಾರ್ಯರಿಗೆ ಅಂತಹ ಸಾಮರ್ಥ್ಯ ಇತ್ತೆಂಬುದರಲ್ಲಿ ಇನ್ನಷ್ಟು ದಾರ್ಢ್ಯವನ್ನು ತಂದುಕೊಳ್ಳುವಂತಾಗಿದೆ.

● 'ಕಾವುಮಠ'ಕ್ಕಿಂತ ಸುಮಾರು ಒಂದು ಫರ್ಲಾಂಗ್ ದೂರದಲ್ಲಿ, ವಿಷ್ಣು ಮೂರ್ತಿ ದೇವಸ್ಥಾನದ ಎದುರು ಒಂದು ಅರಳೀಕಟ್ಟೆ ಇದೆ. ಅದನ್ನು ಕೂಡ್ಲು ಎಂದು ಕರೆಯಲಾಗುವುದು. ಪುಂಡರೀಕಪುರಿ, ಪದ್ಮತೀರ್ಥ ಮುಂತಾದ ಮಾಯಿ ಗಳಿಗೂ ಶ್ರೀ ಮಧ್ವಾಚಾರ್ಯರಿಗೂ ವಾಕ್ಯಾರ್ಥ ಇಲ್ಲಿಯೇ ನಡೆದು, ಆದರಲ್ಲಿ ಗೆದ್ದ ಸಂಕೇತವಾಗಿ ಜಯಪತಾಕೆಯನ್ನು ಕಾವುಮಠದ ಎದುರು ಸ್ಥಾಪಿಸಲಾಗಿದೆ— ಎಂದು ವಿಶ್ಲೇಷಿಸಿಕೊಳ್ಳುವಂತಾಗಿದೆ.

● ಕೋಡಿಪಾಡಿ ಜನಾರ್ದನಸ್ವಾಮಿಯ ದೇವಾಲಯದಲ್ಲಿ ಹಾಗೂ ಉಜಿರೆ ಜನಾರ್ದನಸ್ವಾಮಿಯ ದೇವಾಲಯದಲ್ಲಿ ಶ್ರೀಮದಾಚಾರ್ಯರು ಕುಳಿತು ಪವಿತ್ರೀ ಕರಿಸಿರುವ ಶಿಲೆಯ ಪೀಠಗಳಿವೆ ಎಂದು ತಿಳಿದಂತಾಗಿದೆ.

● ಪಾರಂತೀ ಪಂಚಲಿಂಗೇಶ್ವರ ದೇವಾಲಯದ ಅಂಗಣದಲ್ಲಿ ಆಚಾರ್ಯರ ಸಂಪರ್ಕಕ್ಕೊಳಗಾದದ್ದೆಂದು ಹೇಳಲಾಗುವ ಧಾತ್ರೀವೃಕ್ಷ ಇದೆ.

● ಪಾಂಗಾಳದ ಜನಾರ್ದನ ದೇವಾಲಯದ ಬಳಿ ಸುಮಾರು ಒಂದು ಫರ್ಲಾಂಗ್ ದೂರದಲ್ಲಿ ಆಚಾರ್ಯರ ಸಂಪರ್ಕಕ್ಕೊಳಗಾಗಿದೆ ಎನ್ನಲಾದ ಒಂದು ಕಟ್ಟೆ ಇದೆ—ಎಂಬುದನ್ನು ಗುರುತಿಸಿಕೊಳ್ಳುವಂತಾಗಿದೆ.

● ಉಡುಪಿ ಕುಕ್ಕಿಕಟ್ಟೆಯ ಜೋಡುರಸ್ತೆಯಲ್ಲಿ ಇರುವ ಸಂದಳಿಕೆಪಾಡಿಯ ಭೂತದ ಕೊಟ್ಟಿಗೆಯ ಎದುರೇ ಶಿಶುವಾಗಿದ್ದ ಶ್ರೀಮದಾಚಾರ್ಯರನ್ನು ಅವರ ಬಹಿರ್ನಿಷ್ಕ್ರಮಣದಂದು ರಾತ್ರಿ ವ್ಯಕ್ತಿಯೊಬ್ಬನಲ್ಲಿ ಆವೇಶಗೊಂಡ ಪಿಶಾಚ ಸ್ತುತಿ

ಸಿದ್ದು—ಎಂದು ಗುರುತಿಸಿಕೊಳ್ಳುವಂತಾಗಿದೆ.

● ಗ್ರಂಥಗಳ ಸಂರಕ್ಷಣೆಗಾಗಿ ತಾಮ್ರದ ತಗಡುಗಳಿಂದ ಬರೆಸಿ ಭೂಗತ ಮಾಡುವ ಪದ್ಧತಿ ಹಿಂದೆ ಇತ್ತು. ತಿರುಪತಿ ದೇವಾಲಯದ ಗೋಡೆಯಲ್ಲಿ ಅನ್ನ ಮಾಚಾರ್ಯರ ಕೃತಿಗಳ ರಕ್ಷಣೆಯನ್ನು ಹೀಗೆಯೇ ಮಾಡಲಾಗಿದೆ ಎಂದು 'ಕಟ್ಟೆಲ'ದ ಸಂದರ್ಶನದ ಸಂದರ್ಭದಲ್ಲಿ ಶ್ರೀ ಪಿ. ವಿ. ಆರ್. ಕೆ. ಪ್ರಸಾದ್ ಹೇಳಿದ್ದು. ಇದರಿಂದಾಗಿ ಆಚಾರ್ಯರು ಸಂರಕ್ಷಣೆಯ ದೃಷ್ಟಿಯಿಂದ ಕಟ್ಟೆಲದಲ್ಲಿ ಗ್ರಂಥಗಳನ್ನು ಭೂಗತಗಳನ್ನಾಗಿಸಿರುವುದು ಸಂಭಾವಿತ ಎಂದು ಭಾವಿಸುವಂತಾಗಿದೆ.

### ಇನ್ನಷ್ಟು ವಿಮರ್ಶೆಗೆ ಅವಕಾಶ :

ಆಯಾ ಪ್ರದೇಶಕ್ಕೆ ಸಂದರ್ಶನ ನೀಡಿದ್ದರಿಂದ ಕೆಲವೆಡೆ ಇನ್ನಷ್ಟು ವಿಮರ್ಶೆ ನಡೆಸಲು ಅವಕಾಶ ದೊರೆತಂತಾಗಿದೆ.

● ಶ್ರೀ ಮಧ್ವರು ಭದ್ರಾನದಿಯ ದಡದಲ್ಲಿ ಲೋಕೋಪಕಾರಕ್ಕಾಗಿ ಬಂಡೆಯನ್ನು ಒಂದು ಕೈಯಿಂದ ಎತ್ತಿ ಸ್ಥಾಪಿಸಿರುವರೆಂದು ಸುಮಧ್ವವಿಜಯದಲ್ಲಿದೆ.

ಆ ಬಂಡೆಯ ಸ್ಥಾಪನೆಯಿಂದ ನಡೆದ ಲೋಕೋಪಕಾರ ಯಾವುದು? ಅಲ್ಲಿ ಅಕ್ಕಪಕ್ಕದಲ್ಲೇನೂ ಕೃಷಿಭೂಮಿ ಕಾಣಸದಿರುವುದರಿಂದ ಕೃಷಿಗೆ ಅನುಕೂಲವಾಗುವಂತೆ ಸ್ಥಾಪಿಸಲಾಗಿದೆ ಎನ್ನುವಂತಿಲ್ಲ. ಅಲ್ಲಿ ನದಿ ದಾಟಲು ಬೇಕಾದ ಸೇತುವೆಯ ಆವಶ್ಯಕತೆ ಇರುವಂತೆ ಕಾಣಿಸುವುದಿಲ್ಲ; ಅಲ್ಲದೆ ನದಿ ದಾಟಲು ಪೂರ್ಣವಾದ ಸೇತುವೆ ಅಲ್ಲಿ ಇಲ್ಲದುದರಿಂದ ನದಿಯನ್ನು ದಾಟಿ ಆ ಕಡೆಗೆ ಸಾಗಲು ಅನುಕೂಲವಾಗುವಂತೆ ಶಿಲೆಯನ್ನು ಸ್ಥಾಪಿಸಲಾಗಿದೆ—ಎಂದೂ ಊಹಿಸುವಂತಿಲ್ಲ.

ನದಿಯ ನೀರಿನ ವೇಗವನ್ನು ಕಡಿಮ್ಮೆ ಮಾಡಿ ನದಿಯ ಪ್ರವಾಹ ಇಬ್ಭಾಗವಾಗಿ ಮುಂದುವರಿಯುವಂತೆ ಮಾಡಲು ನದಿಯ ಮಧ್ಯದಲ್ಲಿ ಆ ಬಂಡೆಯನ್ನು ಇಟ್ಟಿದ್ದಿರಬಹುದೇ?

ಎಂಟುನೂರು ವರ್ಷಗಳಲ್ಲಿ ಸಾಕಷ್ಟು ಭೌಗೋಳಿಕ ಬದಲಾವಣೆಗಳು ನಡೆದಿರುವ ಸಂಭವವಿರುವುದರಿಂದ ಆ ಶಿಲೆಯ ಸ್ಥಾಪನೆಯ ಆವಶ್ಯಕತೆ ಇದ್ದಂತಹ ಭೌಗೋಳಿಕ ರಚನೆ ಆಗ ಇದಿದ್ದಿರಬಹುದೇ?—ಎಂದು ಪರಿಶೀಲಿಸಬೇಕಾಗಿದೆ.

● ಅಡೂರಿನ ಮಹಾಲಿಂಗೇಶ್ವರ ದೇವಾಲಯದಲ್ಲಿ ಹಾಗೂ ಕೊಕ್ಕಡದ ಮಹಾಲಿಂಗೇಶ್ವರ ದೇವಾಲಯದಲ್ಲಿ ಅಲ್ಲಿಯ ಸಂಬಂಧಪಟ್ಟ ವ್ಯಕ್ತಿಗಳು ಹೇಳುವಂತೆ ಶ್ರೀ ಮಧ್ವಾಚಾರ್ಯರು ತಾವೇ ಶ್ರೀ ವಿಷ್ಣುವಿನ ಪ್ರತಿಮೆಯನ್ನು ಪ್ರತಿಷ್ಠಾಪಿಸಿರುವರು. ಅಂತೂ ಆ ಪ್ರತಿಮೆಗಳಿಗೂ ಶ್ರೀಮದಾಚಾರ್ಯರಿಗೂ ವಿಶೇಷವಾದ ಸಂಬಂಧ ಇದ್ದೇ ಇರಬೇಕು. ಆ ಸಂಬಂಧ ಯಾವುದಾಗಿದ್ದಿರಬಹುದು?

ಇದರಂತೆ ಇನ್ನೂ ಕೆಲವೆಡೆ ಶ್ರೀ ಮಧ್ವರ ಸಂಪರ್ಕಕ್ಕೊಳಗಾದ ಭಗವನ್ಮೂರ್ತಿಗಳು ಇರುವ ಸಾಧ್ಯತೆ ಇದೆಯೇ?

● ಶ್ರೀಮದಾಚಾರ್ಯರಿಗೆ ವಿಶೇಷ ಪ್ರಿಯವಾಗಿದ್ದ ವಿಷ್ಣುಮಂಗಲದ ಮಹಾವಿಷ್ಣು ಯಾರಿಂದ ಪ್ರತಿಷ್ಠಿತ? ಅದರ ಹಿನ್ನೆಲೆ ಏನು? ಎಂಬುದನ್ನು ಕಂಡು ಹಿಡಿಯಬೇಕಾಗಿದೆ.

● ಗಂಡವಾಟ ಎಂಬ ಮಲ್ಲ ತನ್ನ ಅಣ್ಣನ ಜೊತೆಗೆ ಶ್ರೀಮದಾಚಾರ್ಯರ ಕಂಠ ಹಿಚುಕುವುದು, ಬೆರಳು ಎತ್ತುವುದು—ಮುಂತಾದವುಗಳನ್ನು ನಡೆಸಲು ತೊಡಗಿ ಅಯಶಸ್ವಿಯಾದದ್ದು ಎಲ್ಲಿ? ಸುಮಧ್ವವಿಜಯದಲ್ಲಿ ಆ ಘಟನೆ ನಡೆದ ಸ್ಥಳವನ್ನು ಉಲ್ಲೇಖಿಸಿಲ್ಲ. ಗಂಡವಾಟನನ್ನು ಪರಿಚಯಿಸಿ ಕೊಡುವಾಗ ಕಾಂತಾವರದ ಕಾಂತೇಶ್ವರ ದೇವಾಲಯದ ಧ್ವಜಸ್ತಂಭವನ್ನು ಗಂಡವಾಟನೊಬ್ಬನೇ ಎತ್ತಿಟ್ಟದ್ದನ್ನಲಾಗಿದೆಯಷ್ಟೇ. ಕಾಂತಾವರದ ಕಾಂತೇಶ್ವರ ಸದನಕ್ಕೆ ಧ್ವಜಸ್ತಂಭ ಎತ್ತಿಟ್ಟದ್ದನೆಂದ ಮೇಲೆ ಗಂಟವಾಟ ಕಾಂತಾವರಕ್ಕೆ ಸೇರಿದವನೆಂದು ಊಹಿಸಲು ಅವಕಾಶ ಹೆಚ್ಚಿದೆ. ಹೀಗೆ ಗಂಡವಾಟ ಕಾಂತಾವರಕ್ಕೇ ಸೇರಿದವನೆಂದ ಮೇಲೆ ಅವನ ಬೆಂಬಲಿಗರು, ಗೆಳೆಯರು ಹೆಚ್ಚಾಗಿ ಅಲ್ಲಿಯೇ ಇರುವ ಸಾಧ್ಯತೆ ಇರುವುದರಿಂದ ಅವನ ಮಲ್ಲವಿದ್ಯೆಯ ಜಾಣ್ಮೆಯ ಪ್ರದರ್ಶನಕ್ಕೆ ಅಲ್ಲಿಯೇ ಅವಕಾಶ ಕಲ್ಪಿಸಲಾಗಿದ್ದು, ಅಲ್ಲಿಯೇ ಮಲ್ಲವಿದ್ಯೆಯ ಪರೀಕ್ಷೆ ನಡೆಯಲಾಗಿದೆ—ಎಂದು ಭಾವಿಸುವುದೇ ಹೆಚ್ಚು ಸಮಂಜಸ.

● ಉಜಿರೆಯಲ್ಲಿ ಆಚಾರ್ಯರು ಕುಳಿತ ಶಿಲೆ ಎಂದು ತೋರಿಸಲಾಗುವ ಶಿಲೆಯ ಮೇಲ್ಭಾಗ ಸಾಕಷ್ಟು ಓರೆಕೋರೆಗಳಿಂದ ಕೂಡಿದ್ದು, ಅದರ ಮೇಲೆ ಕುಳಿತುಕೊಳ್ಳಲು ಸಾಧ್ಯವೇ ಇಲ್ಲ ಎನ್ನುವಂತಿದೆ. ದೊಡ್ಡ ಶಿಲೆಯೇ ಒಡೆದು ಇದು ಅದರ ಒಂದು ಭಾಗವಾಗಿದ್ದಿರಬಹುದೇ? ಅಥವಾ ಮೇಲೆ ಕೆಳಗೆ ಆಗಿ ಮೇಲಿನ ಭಾಗ ಕೆಳಗೆ ಆಗಿಬಿಟ್ಟದ್ದಿರಬಹುದೇ?

● ಕಾವು ಮಠದಲ್ಲಿ ತ್ರಿವಿಕ್ರಮ ಪಂಡಿತರ ಹಾಗೂ ನಾರಾಯಣ ಪಂಡಿತರ ವೃಂದಾವನಗಳೆಂದು ತೋರಿಸಲಾಗುವವು ನಿಜವಾಗಿಯೂ ವೃಂದಾವನಗಳೆನಿಸಲು ಸಾಧ್ಯವೇ? ಅವರು ಸನ್ಯಾಸ ಸ್ವೀಕರಿಸುತ್ತಿದ್ದರೆ, ಮುಂದಿನ ಟಿಪ್ಪಣಿಕಾರರಲ್ಲಿ ಯಾರಾದರೂ ಅವರನ್ನು ಸನ್ಯಾಸಾಶ್ರಮದ ಹೆಸರಿನಿಂದ ಉಲ್ಲೇಖಿಸುತ್ತಿದ್ದರು ತಾನೆ? ಸನ್ಯಾಸದ ಅನಂತರ ಅವರ ಪೂರ್ವಾಶ್ರಮದ ಕೃತಿಗಳನ್ನು ಆಶ್ರಮನಾಮದ ರಚನೆಗಳೆಂದೇ ಗುರುತಿಸುವ ಪದ್ಧತಿ ಇದೆಯಲ್ಲವೇ?

● ಅಡೂರಿನ ಮಹಾಲಿಂಗೇಶ್ವರ ದೇವಾಲಯದಲ್ಲಿ ಶ್ರೀ ವಿಷ್ಣುಸಹಸ್ರನಾಮಗಳಿಗೆ ನೂರು ನೂರು ಅರ್ಥಗಳಿವೆ ಎಂದು ಸಾಧಿಸಿದ ಆಚಾರ್ಯರು ಪ್ರವೇಶಿಸಿದ

ಕೇರಳದ ಮತ್ತೆ ಎರಡು ದೇವಾಲಯಗಳು ಯಾವುವು? "ಅನ್ಯದಾಯತನವತ್" —ಎಂದಷ್ಟೇ ಸುಮಧ್ವವಿಜಯದಲ್ಲಿ (6-11) ಉಲ್ಲೇಖಿಸಲಾಗಿದೆ. ಭಾವ ಪ್ರಕಾಶಿಕಾದಲ್ಲಿಯೂ ಆ ದೇವಾಲಯದ ಬಗ್ಗೆ ವಿವರಣೆ ಇಲ್ಲ. ಋಗ್ವೇದದ 'ಸ ವಾ ಉ ದೇವಾ' [10-117-1] ಎಂಬ ಸೂಕ್ತದ ಅರ್ಥವನ್ನು ಕುರಿತು ವಿದ್ವಾಂಸರು ವಿಚಾರಿಸಿದ ಕೇರಳದ ಆ ದೇವಾಲಯ ಯಾವುದಾಗಿದ್ದಿರಬಹುದೆಂದು ಗುರುತಿಸಬೇಕಾಗಿದೆ. ಅದೇ ರೀತಿ 'ಅಪಾಲಾ' ಶಬ್ದದ ಅರ್ಥವನ್ನು ಹೇಳಿದ ಮತ್ತೊಂದು ದೇವಾಲಯವನ್ನು [ಸು. ವಿ. 6-17] ಕೂಡ!

● ಆಚಾರ್ಯರು ವಾಸುದೇವನಾಗಿದ್ದಾಗ ಸಮಾರಂಭ ನಡೆಯುತ್ತಿದ್ದ 'ಬಂಧು ಗೃಹ' (ನಡುವ್ಳೈರಿ) ಮನೆಯಿಂದ ಕೊಡವೂರು ಶಂಕರನಾರಾಯಣ ದೇವಾಲಯಕ್ಕೆ ಬಂದಿದ್ದರೆಂದು ಉಲ್ಲೇಖಿಸಲ್ಪಡುವುದು ತಾನೇ? [ಸು ವಿ.3-2] ಆ ಸಮಾರಂಭ ನಡೆದಿದ್ದ ಕೊಡವೂರಿನ ಆಸುಪಾಸಿನಲ್ಲಿಯೇ ಇದ್ದಿರಬಹುದಾದ ಆ ಮನೆ ಯಾವುದು ಇದ್ದಿರಬಹುದು? ಎಂಬ ಶೋಧನೆಯೂ ನಡೆಯಬೇಕಾಗಿದೆ.

● ಆಚಾರ್ಯರ ಕಾಲದಲ್ಲಿದ್ದ ಊರುಗಳ ಹೆಸರುಗಳಿಗೂ ಈಗ ಇರುವ ಹೆಸರು ಗಳಿಗೂ ತುಂಬ ಬದಲಾವಣೆ ಇದೆ. ಕೆಲವುಗಳನ್ನು ಭಾವಪ್ರಕಾಶಿಕಾದಿಂದಲೋ ಇತರ ಟಿಪ್ಪಣಿಗಳಿಂದಲೋ ತಿಳಿದುಕೊಳ್ಳಬಹುದಾಗಿದೆ. ಮತ್ತೆ ಕೆಲವು ಟಿಪ್ಪಣಿ ಗಳಿಂದ ತಿಳಿದುಕೊಳ್ಳಲಾರದಷ್ಟು ಬದಲಾದದ್ದಿದೆ. ಉದಾಹರಣೆಗೆ—'ಪಾರಂತೀ' ಎಂದು ಉಲ್ಲೇಖಿಸಲ್ಪಟ್ಟದ್ದು ಈಗ 'ಮುದ್ಯ' ಎನಿಸಿದೆ. 'ಭಾವಪ್ರಕಾಶಿಕಾ'ದಲ್ಲಿ ಪಾರಂತೀಸುರಸದನಸ್ಯ 'ಕೇವುಡದೇವಲ' ಇತ್ಯಪಭ್ರಷ್ಟಭಾಷಾ—ಎಂದಿದೆ. 'ಕೇವುಡ ದೇವಲ'ವನ್ನು 'ಪಾರಂತೀಸುರಸದನ' ಎಂದು ಸಂಸ್ಕೃತೀಕರಿಸಿರುವುದು ಹೇಗೆ? ಮುದ್ಯಕ್ಕೆ 'ಕೇವುಡದೇವಲ' ಎಂಬ ಹೆಸರು ಹಿಂದೆ ಇತ್ತೋ? ಇದ್ದರೆ ಯಾವಾಗ ಬದಲಾಗಿದೆ? ಇವೆಲ್ಲವುಗಳ ಮೇಲೆ ಬೆಳಕು ಚೆಲ್ಲಬೇಕಾಗಿದೆ.

ಹಾಗೆಯೇ ಮಧೂರಿನ ರುದ್ರದೇವಾಲಯವನ್ನು 'ಮದನಾಧಿಪತೇಃ ಸುಧಾಮ' [ಸು. ವಿ. 13-9] ಎಂದೂ ಆ ಪ್ರದೇಶವನ್ನು 'ಕಬೇನಾಡು' ಎಂದೂ ಉಲ್ಲೇಖಿಸಲಾಗಿದೆ. ಇದರ ಮೂಲಾನ್ವೇಷಣೆ ಆಗಬೇಕಾಗಿದೆ. 'ಮದೂರಿತಿ' ಅಪಭ್ರಷ್ಟ ಭಾಷಾ ಎಂದು ವಿಶ್ವಪತಿ ತೀರ್ಥರ ವ್ಯಾಖ್ಯಾನದಲ್ಲಿದೆ.

ಅಪಭ್ರಷ್ಟ ಭಾಷೆಯ ಕೆಲವು ಹೆಸರುಗಳನ್ನು ಸಂಸ್ಕೃತೀಕರಿಸಿ ಉಲ್ಲೇಖಿಸಲಾದ ಹೆಸರುಗಳಿಗೂ ಅವುಗಳ ಮೂಲ ಹೆಸರುಗಳಿಗೂ ಇರುವ ಸಂಬಂಧದ ಬಗ್ಗೆಯೂ ವಿವೇಚನೆ ನಡೆಯಬೇಕಾಗಿದೆ. ಉದಾ: 'ಕಾವುಮಠ' ಯಾಕೆ 'ಸ್ವಾರಾಮ' ಎನಿಸಿದೆ? 'ಉಜಿರೆ' 'ಉಚ್ಚಭೂತಿ' ಎನಿಸುವುದು ಹೇಗೆ? ಬನ್ನಂಜೆ ಹೇಗೆ 'ಕಾಳಿಕುಡೆ'—ಎನಿಸುತ್ತಿತ್ತು? ಕುಮಾರಧಾರಾ ಮತ್ತು ನೇತ್ರಾವತೀ ನದಿಗಳ

ಮಧ್ಯದಲ್ಲಿ ಇದ್ದು 'ಸರಿದಂತರ' ಎಂದು ಉಲ್ಲೇಖಿಸಲ್ಪಡುವ 'ಎರ್ಕ' ಗ್ರಾಮ ನದಿಗಳ ಮಧ್ಯದಲ್ಲಿ ಇರುವ ಪ್ರಯುಕ್ತ ತುಳುವಿನಲ್ಲಿ 'ಎಡಕ್ಕೆ'–ಇಡಕಿ–ಇರಕಿ–ಎಂದೆಲ್ಲ ವಿಕಾರಗಳಿಗೊಳಗಾಗಿ 'ಎರ್ಕ'—ಎಂಬ ಹೆಸರನ್ನು ಹೊಂದಿರುವಂತಹದ್ದೇ ? ಸಾಲೆತ್ತೂರು 'ಕಟ್ಟೆಲ' ಆದದ್ದು ಯಾವಾಗಿನಿಂದ ?

—ಹೀಗೆ ಊರುಗಳ, ದೇವಾಲಯಗಳ ನಾಮಗಳ ವಿಷಯದಲ್ಲಿ ಸಾಕಷ್ಟು ವಿಶ್ಲೇಷಣೆ ನಡೆಯಬೇಕು. ಹಾಗೆ ವಿಶ್ಲೇಷಿಸಿದಾಗ ಆಯಾ ಪ್ರದೇಶಕ್ಕೆ ಆಚಾರ್ಯರ ಸಂಪರ್ಕದ ಬಗ್ಗೆ ಇನ್ನಷ್ಟು ಬೆಳಕು ಚೆಲ್ಲಿದಂತಾದೀತು.

**ಅನಿಸಿಕೆಗಳ ಅಭಿವ್ಯಕ್ತಿ :**

ಆಧ್ಯಾತ್ಮಿಕವಾಗಿ ಸಹೃದಯರಾದ ಭಾವುಕರು, ಸಾಧಕರು ಶ್ರದ್ಧಾಭಕ್ತಿ ಪೂರ್ವಕವಾಗಿ ಆಯಾ ಪ್ರದೇಶವನ್ನು ಸಂದರ್ಶಿಸುವಾಗ ಆಯಾ ಪ್ರದೇಶಕ್ಕೆ ಸಂಬಂಧಿಸುವಂತೆ ಕೆಲವು ರಚನಾತ್ಮಕ ಅನಿಸಿಕೆಗಳು, ಆಶಯಗಳು ಅಭಿವ್ಯಕ್ತಗಳಾಗುವುದು ಸಹಜ. ಹಾಗೆ ಅಭಿವ್ಯಕ್ತಗಳಾದ ಕೆಲವು ಅನಿಸಿಕೆಗಳು ಹೀಗಿವೆ.

● ದಂಡತೀರ್ಥದಲ್ಲಿ ಆಚಾರ್ಯರು ಅಧ್ಯಯನ ನಡೆಸಿದ ಸವಿನೆನಪಿಗಾಗಿ ಪಾಠಶಾಲೆಯೊಂದು ಸ್ಥಾಪಿತವಾಗಬೇಕು.

● ಪಾಜಕಕ್ಷೇತ್ರದಲ್ಲಿ ಆಚಾರ್ಯರ ಲೀಲೆಗಳನ್ನು, ಮಹಿಮೆಗಳನ್ನು ಮನದಟ್ಟಾಗಿಸಬಲ್ಲ ಒಂದು 'ವಸ್ತುಸಂಗ್ರಹಾಲಯ' [ಮ್ಯೂಸಿಯಮ್]ದ ಸ್ಥಾಪನೆಯಾಗಬೇಕು. ತಿರುಪತಿಯ ದಾಸಸಾಹಿತ್ಯ ಪ್ರಾಜೆಕ್ಟ್ ಇದರ ವತಿಯಿಂದ ಬೇರೆ ಬೇರೆ ದಾಸರ ಚರಿತ್ರೆಗೆ ಸಂಬಂಧಿಸಿದಂತೆ ರೂಪುಗೊಂಡ 'ವಸ್ತು ಸಂಗ್ರಹಾಲಯ' ದಲ್ಲಿ ಹೇಗೋ ಹಾಗೆ ಇದರಲ್ಲಿ ಆಚಾರ್ಯರ ಚರಿತ್ರೆಗೆ ಸಂಬಂಧಿಸುವ ಚಿತ್ರಗಳು, ಪ್ರತಿಮೆಗಳು, ಕೆತ್ತನೆಗಳು, ಇತರ ಸ್ಮಾರಕಗಳು—ಇವೆಲ್ಲವುಗಳ ಕ್ರೋಡೀಕರಣ ಇರಬೇಕು.

● ಪಾಜಕದ ಪರಶುರಾಮ ಬೆಟ್ಟದಲ್ಲಿರುವ ಪರಶುರಾಮನ ಗುಡಿಯಲ್ಲಿ ಪರಶುರಾಮ ಜಯಂತಿಯಂದು ಧಾರ್ಮಿಕ ಹಾಗೂ ಆಧ್ಯಾತ್ಮಿಕ ಕಾರ್ಯಕ್ರಮಗಳು ವ್ಯಾಪಕವಾಗಿ ನಡೆಯುವಂತಾಗಬೇಕು.

● ಉಡುಪಿ ಅನಂತಾಸನ ದೇವಾಲಯದ ಬಲಮಗ್ಗುಲಲ್ಲಿ ಆಚಾರ್ಯರು ಬರೇ ಅದೃಶ್ಯರಾದುದಲ್ಲ; 'ಅನ್ಯಶ್ಚಾ ರೂಪ್ಯಪೀಠೇಽಸ್ತಿ'—ಎಂಬ ಮಾತಿಗನುಗುಣವಾಗಿ ಅದೃಶ್ಯರಾದ ಆ ಸ್ಥಳದಲ್ಲಿ ವಿಶೇಷವಾಗಿ ಸನ್ನಿಹಿತರೂ ಆಗಿರುವರು. ಆ ಮಹತ್ತ್ವಬುದ್ಧಿ ಬರುವಂತೆ ಆ ಸ್ಥಳದಲ್ಲಿ ಸ್ವಚ್ಛತೆಯನ್ನು ಪಾವಿತ್ರ್ಯವನ್ನು ಅಳವಡಿಸಿ

ಕೊಳ್ಳಬೇಕಲ್ಲದೆ, 'ಅದೃಶ್ಯರಾದ ಸ್ಥಳ' —ಎಂಬ ಈಗ ಇರುವ ಫಲಕದ ಬದಲು 'ಅದೃಶ್ಯರಾದ ಹಾಗೂ ಅದೃಶ್ಯರಾಗಿ ಈಗಲೂ ಇರುವ ಸ್ಥಳ' —ಎಂಬ ಫಲಕವನ್ನು ಹಾಕಬೇಕು.

● ಪಾರಂತೀ ಪಂಚಲೀಗೇಶ್ವರ ದೇವಾಲಯದಲ್ಲಿ ಪಂಚಲಿಂಗಗಳ ಪ್ರತೀಕಗಳಲ್ಲಿ ವಾಸುದೇವಾದಿ ಪಂಚರೂಪಿ ಪರಮಾತ್ಮನನ್ನೇ ಆರಾಧಿಸುವುದಕ್ಕೆ ಅನುಕೂಲವಾಗುವಂತೆ ಪಂಚರೂಪಿ ಪರಮಾತ್ಮನ ಪ್ರತೀಕಗಳನ್ನು ಸ್ಥಾಪಿಸುವಂತಾಗಬೇಕು.

● ಕಾಂತಾವರ, ಮಧ್ವ, ಮಧ್ಯವಾಟ, ಕಟ್ರೆಲ ಮುಂತಾದ ಅನೇಕ ಸ್ಥಳಗಳಲ್ಲಿ ಇಂದೂ ಉಳಿದುಕೊಂಡಿರುವ ಶಾಸನಗಳ ಅಧ್ಯಯನ ನಡೆದು ಅವುಗಳಿಂದ ಶ್ರೀ ಮದಾಚಾರ್ಯರ ಬಗ್ಗೆ ಹೊಸಬೆಳಕು ಚೆಲ್ಲಬಹುದೇ ಎಂದು ಸಂಶೋಧಿಸಬೇಕಾಗಿದೆ.

● 'ಶ್ರೀ ಮಧ್ವಾಚಾರ್ಯೈರೇಕಹಸ್ತೇನ ಆನೀಯ ಸ್ಥಾಪಿತಾ ಶಿಲಾ' ಎಂಬ ಬರವಣಿಗೆವುಳ್ಳ ಕಳಸದ ಬಂಡೆಯನ್ನು ಒಡೆದು ಹಾಕಲು ಕೆಲವು ತಿಳಿಗೇಡಿಗಳು ಯತ್ನಿಸಿದುದು ಕಾಣುತ್ತದೆ. ಅದರ ಸಂರಕ್ಷಣೆಗೆ ವ್ಯಾಪಕವೂ, ಸಮರ್ಥವೂ ಆದ ಯೋಜನೆ ಆದಷ್ಟು ಬೇಗ ಸಿದ್ಧವಾಗಿ, ಕಾರ್ಯಗತವಾಗಬೇಕಾಗಿದೆ.

● ಆಚಾರ್ಯರು ಸಂಚರಿಸಿದ ಉತ್ತರಭಾರತ ಮುಂತಾದ ಕಡೆಗಳಿಗೂ ಯಾತ್ರೆ ಕೈಗೊಂಡು ಆಯಾ ಪ್ರದೇಶಗಳಲ್ಲಿ ದೇವಾಲಯಗಳಲ್ಲಿ ಆಚಾರ್ಯರ ಸಂಪರ್ಕದ ಬಗ್ಗೆ ಪರಿಶೀಲನೆ ನಡೆಸಬೇಕು.

**ಸ್ಮಾರಕಗಳ ನಿರ್ಮಾಣ:**

ಆಚಾರ್ಯರ ಸಂಪರ್ಕಕ್ಕೊಳಗಾದ ಪ್ರತಿಯೊಂದು ಪ್ರದೇಶದಲ್ಲಿಯೂ, ದೇವಾಲಯದಲ್ಲಿಯೂ ಅವರ ಪ್ರತೀಕವನ್ನೊಳಗೊಂಡ ಒಂದು ಮಧ್ವಮಂಟಪವನ್ನು ಸ್ಥಾಪಿಸಬೇಕು; ಆ ಪ್ರದೇಶಕ್ಕೆ, ಅಥವಾ ದೇವಾಲಯಕ್ಕೆ ಆಚಾರ್ಯರ ಸಂಪರ್ಕದನ್ನು ಉಲ್ಲೇಖಿಸುವ ಸುಮಧ್ವವಿಜಯದ ಶ್ಲೋಕಗಳನ್ನು ಶಿಲೆಯಲ್ಲಿ ಕೆತ್ತಿಸಬೇಕು; ಆಯಾ ಸ್ಥಳಕ್ಕೆ ಹೋಗಲು ಯಾತ್ರಿಕರಿಗೆ ಅನುಕೂಲವಾಗುವಂತೆ ಅಲ್ಲಲ್ಲಿ ಮಾರ್ಗದರ್ಶಕ ಫಲಕಗಳನ್ನು ಸ್ಥಾಪಿಸಬೇಕು—ಇವಿಷ್ಟು ಅಖಿಲಭಾರತ ಮಾಧ್ವಮಹಾಮಂಡಲದ ನೇತೃತ್ವದಲ್ಲಿ ನಡೆಯುವಂತಾಗಲಿ—ಎಂದು ಕೋಡಿಪಾಡಿ ಜನಾರ್ದನ ಸ್ವಾಮಿಯ ಸನ್ನಿಧಾನದಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ಶ್ರೀ ಪ್ರಭಂಜನಾಚಾರ್ಯರು ಪ್ರಸ್ತಾಪಿಸಿದ್ದನ್ನು ಮಾಧ್ವಮಹಾಮಂಡಲದ ಸಂರಕ್ಷಕರಾದ ಶ್ರೀ ವಿಶ್ವೇಶತೀರ್ಥರೂ, ಅಧ್ಯಕ್ಷರಾದ ಶ್ರೀ ವಿಷ್ಣುಮೂರ್ತಿ ಎರ್ಮಾಡಿತ್ತಾಯರೂ ಮೌನವಾಗಿ ಮುಗುಳ್ನಗುತ್ತ ಸಮ್ಮತಿಸಿದರು.

ಅಲ್ಲದೆ, ಕಣ್ವತೀರ್ಥ ಮಠದಲ್ಲಿ ನಡೆದ ಯಾತ್ರೆಯ ಸಮಾರೋಪ ಸಭೆಯಲ್ಲಿ ಶ್ರೀ ವಿಶ್ವೇಶತೀರ್ಥರೇ ಆಚಾರ್ಯರು ಸಂದರ್ಶಿಸಿದ್ದ ಸ್ಥಳಗಳಲ್ಲಿ ಸ್ಮಾರಕಗಳ ನಿರ್ಮಾಣವನ್ನು ಆದಷ್ಟು ಬೇಗ ನೆರವೇರಿಸಲು ನಾವೆಲ್ಲ 'ಪವಿತ್ರ ಸಂಕಲ್ಪ'ವನ್ನು ನಡೆಸಬೇಕೆಂದು ಆದೇಶಿಸಿದ್ದರು.

ಆದ್ದರಿಂದ ಈ ಯಾತ್ರೆಯ ಫಲವಾಗಿ ಶ್ರೀ ಮಧ್ವರು ಸಂದರ್ಶಿಸಿದ್ದ ಸ್ಥಳಗಳಲ್ಲಿ ಮಾಧ್ವಮಹಾಮಂಡಳದ ನೇತೃತ್ವದಲ್ಲಿ ಸ್ಮಾರಕಗಳ ನಿರ್ಮಾಣ ಆದಷ್ಟು ಶೀಘ್ರವಾಗಿ ನಡೆಯಬಹುದೆಂದು ನಿರೀಕ್ಷಿಸಬಹುದಾಗಿದೆ,

**ಪುಷ್ಕರಿಣಿಗಳ ಪರಿಷ್ಕಾರ :**

ಆಚಾರ್ಯರ ಸಂಪರ್ಕಕ್ಕೊಳಗಾದ, ಅವರು ಚಾತುರ್ಮಾಸ್ಯ ವ್ರತವನ್ನು ಕೈಗೊಂಡಿದ್ದ ಸ್ಥಳಗಳಲ್ಲಿ, ದೇವಾಲಯಗಳಲ್ಲಿ ಹೆಚ್ಚಾಗಿ ಪುಷ್ಕರಿಣಿಗಳು ಇದ್ದೇ ಇವೆ. ದಂಡತೀರ್ಥ, ಎರ್ಕಿಮಠ, ಕಣ್ವತೀರ್ಥ ಮಠ, ವಿಷ್ಣುಮಂಗಲ ದೇವಾಲಯ, ಕೋಡಿಪಾಡಿ—ಮುಂತಾದ ಕಡೆಗಳಲ್ಲಿ ಸರೋವರಗಳಿದ್ದು, ಅವು ಕೆಸರಿನಿಂದ ತುಂಬಿವೆ. ವೈಶಾಖ ಮಾಸದಲ್ಲಿ ಸ್ನಾನ ಮಾಡಲಾಗದಷ್ಟು ಕಮ್ಮಿ, ಕಲುಷಿತ ನೀರು. ವಿಷ್ಣುಮಂಗಲದ 'ಚಕ್ರತೀರ್ಥ'ದಲ್ಲಂತೂ ಮಧ್ಯದಲ್ಲಿ ತೋಡಿರುವ 'ಕಂಡಿಕೆ'ಯಲ್ಲಷ್ಟೇ ಪ್ರೋಕ್ಷಿಸಿಕೊಳ್ಳಲು ಬೇಕಾದಷ್ಟು ನೀರು. ಇವುಗಳ ಪರಿಷ್ಕಾರವೂ ಆಗಬೇಕಾಗಿದೆ. ಪಾಜಕದಲ್ಲಿ ವಾಸುದೇವ ತೀರ್ಥದ ಪರಿಷ್ಕಾರ ಹೇಗೆ ನಡೆದಿದೆಯೋ ಹಾಗೆ. ಈ ಬಗ್ಗೆ ಅಲ್ಲಲ್ಲಿ ಶ್ರೀಪ್ರಭಂಜನಾಚಾರ್ಯರು ತಮ್ಮ ಪ್ರವಚನಗಳಲ್ಲಿ ಪ್ರಸ್ತಾಪಿಸಿ ಅಲ್ಲಲ್ಲಿಯ ಅಧಿಕಾರಿಗಳ ಗಮನಕ್ಕೆ ತರುತ್ತಿದ್ದರು.

**ಪಾರಂತಿಯಲ್ಲಿ ಪೂಜೆಯ ಸುವ್ಯವಸ್ಥೆ :**

ಪಾರಂತಿ ಪಂಚಲಿಂಗೇಶ್ವರ ದೇವಾಲಯದಲ್ಲಿ ವಂಶಪಾರಂಪರ್ಯದಿಂದ ಬಂದ ಪೂಜೆಯನ್ನು ಶ್ರೀ ಅನಂತಕೃಷ್ಣ ಉಡುಪರು ನಡೆಸುತ್ತಿದ್ದಾರೆ. ಪೂಜೆಗಾಗಿ ಯಾವುದೇ ಬಗೆಯ ಆದಾಯವಿಲ್ಲ. ಗೌಡರೇ ಅಧಿಕ ಸಂಖ್ಯೆಯಲ್ಲಿ ಉಳ್ಳ ಆ ಊರಿನ ಭಕ್ತರ ನೆರವನ್ನೂ ವಿಶೇಷವಾಗಿ ನಿರೀಕ್ಷಿಸುವಂತಿಲ್ಲ. ಹೀಗಾಗಿ ಅಲ್ಲಿಯ ಪೂಜೆಯ ಬಗ್ಗೆ ಅರ್ಚಕರು ಎಷ್ಟು ತಾನೇ ಆಸಕ್ತಿ ತಾಳಿಯಾರು? ಈ ಪರಿಸ್ಥಿತಿಯನ್ನು ಪರಿಶೀಲಿಸಿದ ಶ್ರೀ ವಿದ್ಯಾಧೀಶತೀರ್ಥರು, ಶ್ರೀ ಪ್ರಭಂಜನಾಚಾರ್ಯರು ಹಾಗೂ ಮತ್ತೆ ಕೆಲವು ಯಾತ್ರಿಕರು ಸೇರಿ ಯೋಚನೆ ಮಾಡಿ ಪಂಚಲಿಂಗೇಶ್ವರ ದೇವಾಲಯಕ್ಕೆ ಸಂಬಧಿಸಿದಂತ 'ನಿತ್ಯಪೂಜಾನಿಧಿ'ಯ ಯೋಜನೆಯೊಂದನ್ನು ರೂಪಿಸಬೇಕೆಂದು ನಿರ್ಣಯಿಸಿದರು. ಅಂದು ರಾತ್ರಿ ಕೋಡಿಪಾಡಿ ಜನಾರ್ದನ

ದೇವಾಲಯದಲ್ಲಿ ನಡೆದ ಪ್ರವಚನದಲ್ಲಿ ಆ ಯೋಜನೆಯ ಪ್ರಸ್ತಾವ ಮಾಡಿದಾಗ, ಆಗಾಗಲೇ ಇಪ್ಪತ್ತೈಕ್ಕಿಂತಲೂ ಅಧಿಕ ಸಾಧಕರು ತಮ್ಮ ಹೆಸರಲ್ಲಿ ಒಂದು ದಿನದ ಪೂಜೆ ನಡೆಯುವಂತೆ ತಾವು ಇನ್ನೂರು ರೂ. ಶಾಶ್ವತ ನಿಧಿಯಾಗಿ ಕೊಡಲು ಮುಂದೆ ಬಂದರು ಹೀಗೆ ಉತ್ಸಾಹಿಗಳೆಲ್ಲ ಕೊಟ್ಟ ಮೇಲೆಯೂ ವರ್ಷದ ಮುನ್ನೂರ ಅರ್ವತ್ತೈಗಳಲ್ಲಿ ಕೆಲವು ದಿನಗಳ ನಿಧಿ ಬಾಕಿ ಉಳಿಯಿತೆಂದರೆ ಆ ಎಲ್ಲ ದಿನಗಳಿಗೆ ಬೇಕಾಗುವಷ್ಟು ನಿಧಿಯನ್ನು ತಾವು ಕೊಡುವುದಾಗಿ ಶ್ರೀ ಪಿ ವಿ ಆರ್ ಕೆ. ಪ್ರಸಾದ್ ತಿಳಿಸಿದರು.

ಅಂತೂ ಪಾರಂತಿ ದೇವಾಲಯದ ಆರ್ಥಿಕ ಭದ್ರತೆಗಾಗಿ 'ನಿತ್ಯಪೂಜಾನಿಧಿ' ಯ ಯೋಜನೆಯೊಂದು ಈ ಯಾತ್ರೆಯ ಫಲವಾಗಿ ರೂಪುಗೊಂಡಂತಾಗಿದೆ. ಹಿಂದೆ ಆಚಾರ್ಯರ ಕಾಲದಲ್ಲಿಯೂ ಒಮ್ಮೆ ನಿಂತುಹೋಗಿದ್ದ ಇಲ್ಲಿಯ ಪೂಜೆಗೆ ಮತ್ತೆ ವ್ಯವಸ್ಥೆಯನ್ನು ಕಲ್ಪಿಸಿದ್ದ ಆಚಾರ್ಯರಿಗೆ ಇದರಿಂದಾಗಿ ಗೌರವವನ್ನು ಸಲ್ಲಿಸಿದಂತಾಗಿದೆ.

ಶ್ರೀ ಪಲಿಮಾರು ಮಠದ ಶ್ರೀ ವಿದ್ಯಾಧೀಶತೀರ್ಥರ ಅಧ್ಯಕ್ಷತೆಯಲ್ಲಿ ಮೂರು ಸದಸ್ಯರನ್ನೊಳಗೊಂಡ ಸಮಿತಿಯೊಂದು ಆ ನಿಧಿಯ ವ್ಯವಸ್ಥೆಗಾಗಿ ರೂಪುಗೊಳ್ಳಲಿದ್ದು, ಅದರ ಮೂಲಕ ಅಲ್ಲಿ ಮಾಧ್ವಸಿದ್ಧಾಂತಕ್ಕನುಗುಣವಾಗಿ ಅನುಸಂಧಾನವನ್ನು ಅಳವಡಿಸಿಕೊಳ್ಳುವಂತೆ, ಪೂಜೆ ನಡೆಸುವಂತೆ ಮಾರ್ಗದರ್ಶನ ನೀಡಲಾಗುವುದು. ಅಲ್ಲಿ ಕೆಲವು ವರ್ಷಗಳ ಹಿಂದೆಯಷ್ಟೇ ತಂದಿಟ್ಟಿರುವ ನಂದಿಯ ಪ್ರತಿಮೆ, ಜಲದ್ರೋಣಿ—ಮುಂತಾದುವನ್ನು ಬೇರೆಡೆಗೆ ಸಾಗಿಸಿ ಅದು ಪಂಚರೂಪಿ ಪರಮಾತ್ಮನ ದೇವಾಲಯವೇ ಹೊರತು ರುದ್ರನ ದೇವಾಲಯ ಅಲ್ಲ: ಪಂಚಲಿಂಗೇಶ್ವರ ಅಂದರೆ ಪಂಚ ಪ್ರತೀಕಗಳನ್ನೊಳಗೊಂಡ ಮುಖ್ಯವಾಗಿ ಈಶ್ವರ ಎನಿಸುವ ಭಗವಂತನೇ ಎಂಬ ಭಾವನೆ ಸ್ಫುಟವಾಗುವಂತೆ ಹಿಂದೆ ಅಲ್ಲಿ ಇದ್ದ ವಾತಾವರಣವನ್ನೇ ಮುಂದುವರಿಸಿಕೊಂಡು ಹೋಗುವಂತೆ ಅರ್ಚಕರಿಗೆ ಮನವರಿಕೆ ಮಾಡಲಾಗುವುದು.

ಪ್ರತಿ ಕಾರ್ತಿಕ ಶುದ್ಧ ಪೂರ್ಣಿಮೆಯಂದು ಅಲ್ಲಿರುವ ಧಾತ್ರೀ ವೃಕ್ಷದ ಸನ್ನಿಧಾನದಲ್ಲಿ ಧಾತ್ರೀ ಹೋಮವನ್ನು ನಡೆಸಿ, ಆದಷ್ಟು ಅಧಿಕ ಭಾವುಕರ ಸಾಧಕರ ಗಮನಕ್ಕೆ ಆ ದೇವಾಲಯ ಬರುವಂತೆ ಮಾಡಬೇಕೆಂದೂ ಶ್ರೀ ಪಲಿಮಾರು ಮಠದ ಶ್ರೀಗಳು ಸಂಕಲ್ಪಿಸಿರುವರು.

**ಕಾವುಮಠದಲ್ಲಿ ಮಠದ ವಾತಾವರಣಕ್ಕೆ ಬೀಜಾವಾಪ :**

ಕಾವುಮಠದಲ್ಲಿ ಮಠದ ವಾತಾವರಣ ಹಾಗೂ ಮಾಧ್ವ ಸಂಪ್ರದಾಯ

ಪೂರ್ಣವಾಗಿ ಅಳಿದು ಹೋಗಿರುವ ಬಗ್ಗೆ ವಿಷಾದವನ್ನು ವ್ಯಕ್ತಪಡಿಸಿದ್ದ ಶ್ರೀಪಾದರು ಅಲ್ಲಿ ಮತ್ತೆ ಮಠದ ವಾತಾವರಣ ಹಬ್ಬಬೇಕೆಂದರೆ ಇರುವ ಒಂದೇ ಒಂದು ಮಾರ್ಗವೆಂದರೆ ಆ ಮನೆಯ ಯಾರಾದರೂ ಚೆನ್ನಾಗಿ ಶಾಸ್ತ್ರ ಕಲಿಯಬೇಕು—ಆ ಮೂಲಕ ಮತ್ತೆ ಪಂಡಿತ ಪರಂಪರೆ ಚಿಗುರಲು ಸಾಧ್ಯ—ಎಂದು ತಮ್ಮವರಲ್ಲಿ ಹೇಳಿಕೊಂಡಿದ್ದರು.

ಈ ಹಿನ್ನೆಲೆಗೆ ಅನುಗುಣವಾಗಿ ಕಾವುಮಠದಲ್ಲೊಂದು ಘಟನೆ ನಡೆಯಿತು. ಆ ಮನೆಯಲ್ಲಿ ವಾಸಿಸುವ, ತ್ರಿವಿಕ್ರಮಪಂಡಿತರ ವಂಶದವರೆನ್ನಲಾಗುವ 'ವಾಸುದೇವರಾವ್' ಇವರು ಆ ಮನೆಗೆ ಯಜಮಾನರು ಅವರ ಹಿರಿಯ ಪುತ್ರನ ಚಿರಂಜೀವಿಯ ಹೆಸರು ಪ್ರಣವಸ್ವರೂಪ. ಶ್ರೀಗಳವರನ್ನು ಕಂಡಾಕ್ಷಣ ಅವನ ಜಿಜ್ಞಾಸೆ; 'ಪ್ರಣವ ಅಂದರೆ ಯಾವ ದೇವರು? ಐದಾರು ವರ್ಷ ವಯಸ್ಸಿನ ಬಾಲಕರಲ್ಲಿ ಸಹಜವಾಗಿ ಇರದ ಈ ಜಿಜ್ಞಾಸೆಯಿಂದ ಶ್ರೀಗಳವರ ಮನಸ್ಸನ್ನು ಸೆಳೆದ ಆ ಬಾಲಕನಿಗೆ ಶಾಸ್ತ್ರಾಭ್ಯಾಸ ನಡೆಸಬೇಕು—ಎಂದು ಶ್ರೀಗಳವರು ವಾಸುದೇವರಾಯರಲ್ಲಿ ಹೇಳಿದಾಗ ಅವರು ಒಪ್ಪಿಕೊಂಡರು. ಆ ಪ್ರಣವ ಶಾಸ್ತ್ರಾಭ್ಯಾಸ ನಡೆಸಿ, ಅವನ ಮೂಲಕ ಮತ್ತೆ ಆ ಮನೆ ಕಾವುಮಠದ ವಾತಾವರಣವನ್ನು ಪಡೆಯುವಂತಾಗಬೇಕೆಂದು ಶ್ರೀಪಾದರ ಹಾರೈಕೆ ಅಲ್ಲಿಯ ಆರಾಧ್ಯ ಶ್ರೀವತ್ಸನಾರಾಯಣನ ಚಿತ್ತಕ್ಕೆ ಬಂತೆಂದರೆ ಶ್ರೀಪಾದರು ನಿರೀಕ್ಷಿಸುವಂತೆ ಅಲ್ಲಿ ಪಂಡಿತ ಪರಂಪರೆ ಚಿಗುರೀತು! ಹಾಗೆ ಆದಲ್ಲಿ ಅದಕ್ಕೆ ಬೇಕಾದ 'ಬೀಜಾವಾಪ' ನಡೆಸಿದ ಯಶಸ್ಸು ಈ ಯಾತ್ರೆಗೇ ಸಲ್ಲಬೇಕಾದ್ದು.

## ವ್ಯಾಪಕ ಅಧ್ಯಯನಾದಿಗಳಿಗೆ ನಾಂದಿ :

ಈ ಯಾತ್ರೆಯಲ್ಲಿ ಅಲ್ಲಲ್ಲಿ ವೀಡಿಯೋ ತೆಗೆಯಲಾಗಿತ್ತು. ಫೋಟೋ ತೆಗೆಯಲಾಗಿತ್ತು. ಇದರಿಂದಾಗಿ ಆಚಾರ್ಯರ ಚರಿತ್ರೆ ಬಗ್ಗೆ ವ್ಯಾಪಕವಾಗಿ ಅಧ್ಯಯನ ಮಾಡಲು ಸಂಶೋಧನೆ ಮಾಡಲು ಸೌಕರ್ಯ ಆಗಿದೆ ಇನ್ನು ಮುಂದೆ ಸುಮಧ್ವವಿಜಯ ಪುಸ್ತಕವನ್ನು ಮುದ್ರಿಸುವಾಗ, ಅದರಲ್ಲಿ ಉಲ್ಲೇಖಿಸಲ್ಪಟ್ಟಿರುವ ಅನೇಕ ಸ್ಥಳಗಳ ದೇವಾಲಯಗಳ, ದೇವತೆಗಳ ಚಿತ್ರಗಳನ್ನೂ ಹಾಕಬಹುದಾಗಿದೆ.

## ಗುರುತಿಸಲಾಗದ ಪರಿಣಾಮಗಳು :

ಇವಿಷ್ಟು ಈ ಯಾತ್ರೆಯ ಗುರುತಿಸಿ ತೋರಿಸಬಹುದಾದ ಪರಿಣಾಮಗಳಾದರೆ, ಫಲಗಳಾದರೆ, ಸ್ಪಷ್ಟವಾಗಿ ಗುರುತಿಸಲಾಗಿದೆ. ಆದರೆ ಅಂತಃಕರಣದ ಮೇಲೆ ಗಾಢವಾಗಿ ಅಚ್ಚೊತ್ತಿದಿರಬಹುದಾದ ಪರಿಣಾಮಗಳು ಅದೆಷ್ಟೋ ಇರುವ ಸಾಧ್ಯತೆ ಇದ್ದೇ ಇದೆ.



# ಸಂದರ್ಶಕರ ಅಂತರ್ಯ

'ಪಾವನಯಾತ್ರೆ'ಯಲ್ಲಿ ನೂರಕ್ಕಿಂತಲೂ ಅಧಿಕ ಸಾಧಕರು ಪಾಲ್ಗೊಂಡಿದ್ದರು. ಅವರಲ್ಲಿ ಯಾತ್ರೆಯ ಬಗ್ಗೆ ಹಾರ್ದಿಕ ಆಶಯವನ್ನು ತಿಳಿಸಲು ಕೇಳಿಕೊಳ್ಳಲಾಗಿತ್ತು. ಇದಕ್ಕೆ ಕೆಲವರಷ್ಟೇ ಸ್ಪಂದಿಸಿ, ತಮ್ಮ ಅನಿಸಿಕೆಗಳನ್ನು ಕಳುಹಿಸಿದ್ದಾರೆ. ಅವುಗಳಲ್ಲಿ ಅತಿಪ್ರಶಂಸಾತ್ಮಕಗಳಾಗಿ ಕಾಣದಂತಹ, ಪುನರುಕ್ತಗಳಾಗದಂತಹ ಮಾತುಗಳನ್ನಷ್ಟೇ ಆಯ್ಕೆ ಮಾಡಿ ಇಲ್ಲಿ ಸಂಗ್ರಹಿಸಲಾಗಿದೆ.

### ಶ್ರೀಮದಾಚಾರ್ಯರ ಕಾಲಕ್ಕೇ ಕರೆದೊಯ್ದ ಯಾತ್ರೆ

'ಪರಮಾನಂದಂ' 'ಪರಮಾನಂದಂ' 'ಪರಮಾನಂದಂ' 'ಪರಮಾನಂದಂ' — ಎಂದು ನಾಲ್ಕು ಬಾರಿ ಪುನರಾವರ್ತನಗೊಳ್ಳುವ 'ಯಮಕ ಭಾರತ'ದ ಮೊದಲ ಪದ್ಯದ ಪ್ರವಚನದೊಂದಿಗೆ ಪ್ರಾರಂಭವಾದ ನಮ್ಮ ಯಾತ್ರೆ ನಿಜಕ್ಕೂ ಕಣ್ಣಿಗೆ ಪರಮಾನಂದ, ಕಿವಿಗೆ ಪರಮಾನಂದ, ಉದರಕ್ಕೆ ಪರಮಾನಂದವನ್ನು ನೀಡಿದ್ದರಿಂದ ಮನಸ್ಸಿಗೂ ಪರಮಾನಂದಕರವಾಗಿತ್ತು. ಯತಿತ್ರಯರು ಹಾಗೂ ಶ್ರೀ ಪ್ರಭಂಜನಾಚಾರ್ಯರು ಸೇರಿ ನಮ್ಮನ್ನು ಶ್ರೀಮದಾನಂದತೀರ್ಥರ ಕಾಲಕ್ಕೇ ಕರೆದುಕೊಂಡು ಹೋದಂತಾಗಿತ್ತು.

ಕೋಡಿಪ್ಪಾಡಿಯಲ್ಲಿ ಮೂರು ರಾತ್ರಿಗಳ ನಮ್ಮ ವಾಸ್ತವ್ಯಕ್ಕಾಗಿ ನಾವು ಇಳಿದುಕೊಂಡಿದ್ದ ಮನೆಯ ಜನರು ಅತಿಥಿಗಳಾದ ನಮಗೆ ತೋರಿದ ಆದರ–ಉಪಚಾರ ಅವರ್ಣನೀಯ. ಶಹರದಲ್ಲಿ ಇಂಥ ಮನೆ, ಇಂಥ ಜನ, ಇಂಥ ಉಪಚಾರ ಸಿಗುವುದು ದುಸ್ತರ.

— ಕೆ. ವಾಣಿ ವಿ. ಕುಲಕರ್ಣಿ, ಗುಲ್ಬರ್ಗ

[ಶ್ರೀಮತಿ ವಾಣಿಯವರು ಏಳು ದಿನಗಳ ಯಾತ್ರೆಯ ವರದಿ ಹಾಗೂ ಅಲ್ಲಲ್ಲಿ ನಡೆದ ಪ್ರವಚನಗಳ ಸಂದೇಶಗಳನ್ನು ಬೆರೆಸಿ ಇಪ್ಪತ್ತು ಪುಟಗಳ ವ್ಯಾಪ್ತಿಯ ಪ್ರಬಂಧವನ್ನು ಸಿದ್ಧಪಡಿಸಿರುವರು. ಅದರಲ್ಲಿಯ ಒಂದೆರಡು ಮಾತುಗಳನ್ನಷ್ಟೇ ಇಲ್ಲಿ ಉಲ್ಲೇಖಿಸಲಾಗಿದೆ.]

x x x x x

### ಹದಿಮೂರು ಕೇಳ್ದ ವಿಪ್ರರ ಯಾತ್ರೆ ಪೂರ್ಣವಾಗಿಸಿತು

ಎಷ್ಟೋ ಯಾತ್ರೆಗಳಲ್ಲಿ ಭಾಗವಹಿಸಿದ ನನಗೆ ಈ ಯಾತ್ರೆಯಲ್ಲಿ ಉಂಟಾದ ಅನುಭವಗಳು ತುಂಬ ಪ್ರಭಾವಕಾರಿಗಳು. ಈ ಯಾತ್ರೆಯಲ್ಲಿ ಕಂಡ ಸ್ಥಳಗಳಲ್ಲಿ ಉಡುಪಿಯೊಂದನ್ನು ಬಿಟ್ಟರೆ ಮತ್ತೆಲ್ಲ ಸ್ಥಳಗಳು ಮುಗ್ಧ, ಸರಳ, ಉದಾರ,

ಆದರ ಸ್ವಭಾವದ ಜನರನ್ನು ಒಳಗೊಂಡ ಹಳ್ಳಿಗಳೇ ಆಗಿದ್ದವು. ಪ್ರಾಯಃ ಪಟ್ಟಣಗಳಲ್ಲಿ ಕಾಣಸಿಗದ ಅತಿಥಿಸತ್ಕಾರದ ಅರಿವಾದದ್ದು ಪುತ್ತೂರು ಸಮೀಪದ ಪುಟ್ಟ ಗ್ರಾಮ ಕೋಡಿಪ್ಪಾಡಿಯ ವಿಶಾಲ ಗೃಹಗಳಲ್ಲಿ. ಪ್ರಾಯಃ ಇಲ್ಲಿಯ ಪೂರ್ವಿಕರ ಈ ತೆರನಾದ ಸತ್ಕಾರ ಸಂಸ್ಕೃತಿಗೆ ಆಚಾರ್ಯರ ಇಲ್ಲಿಯ ಚಾತುರ್ಮಾಸ್ಯವೇ ಕಾರಣವಾಗಿರಬೇಕು.

ಆಚಾರ್ಯರು ಸ್ವತಃ ನಡೆಸಿದ ವಾದಗಳನ್ನು ಪವಾಡಗಳನ್ನು ಆಯಾ ಕ್ಷೇತ್ರಗಳಲ್ಲಿಯೇ ನಿಂತು, ಅರಿತು, ಜೊತೆಯಲ್ಲಿ ಯಮಕಭಾರತ ಹಾಗೂ ಶ್ರೀ ಸುಮಧ್ವವಿಜಯದ ಶ್ರವಣಗೈಯುತ್ತ, ಶ್ರೀ ಹರಿಯ ಸ್ವಾಮಿತ್ವವನ್ನು ಸ್ತುತಿಸುವ ಸಾಹಿತ್ಯದ ಭಜನೆಯೊಂದಿಗೆ ಸಾಗಿದ ಈ ಯಾತ್ರೆಯಿಂದ ವಿಶಿಷ್ಟವಾದ ಧನ್ಯತಾ ಭಾವನೆ ನನ್ನಲ್ಲಿ ಒಡಮೂಡಿದೆ.

ಮಧ್ವಕೊಳದಲಿ ಮಿಂದು, ಮುದ್ದು ಕಳ್ಳನ ಕಂಡು
ಶುದ್ಧ ಕುಲದೈವ ಸನ್ನಿಧಿಯೊಳಂದು ।
ಮುಗ್ಧ ಮುದ್ದಿನ ಮುಖದಿ ಸುರಿದ ನುಡಿಮುತ್ತು
ಕೇಳ್ದ - ವಿಪ್ರರ ಯಾತ್ರೆ ಪೂರ್ಣವಾಗಿಸಿತು ॥

— ಕೊರ್ಲಹಳ್ಳಿ ವೇಂಕಟೇಶ ಆಚಾರ್ಯ

[ಶ್ರೀ ಕೊರ್ಲಹಳ್ಳಿ ವೆಂಕಟೇಶ ಆಚಾರ್ಯರು ಏಳು ದಿನಗಳ ಸಮಗ್ರ ಯಾತ್ರೆಯನ್ನು ಇಪ್ಪತ್ತು ಪದ್ಯಗಳಲ್ಲಿ ಸೆರೆಹಿಡಿದಿರುವರು. ಆ "ಯಾತ್ರಾಸಪ್ತಾಹದ ಪದ್ಯವಿಂಶತಿ" ಯಲ್ಲಿ ಒಂದು ಪದ್ಯವನ್ನಷ್ಟೇ ಇಲ್ಲಿ ಉಲ್ಲೇಖಿಸಲಾಗಿದೆ.]

x x x x x

## ಸ್ಮಾರಕಗಳ ನಿರ್ಮಾಣ ಆಗಬೇಕು

ಆಚಾರ್ಯರ ಪವಿತ್ರ ಸ್ಥಳಗಳಲ್ಲಿ ಮಧ್ವಮಂಟಪ, ಅಲ್ಲಿಗೆ ದಾರಿಯನ್ನು ಸೂಚಿಸುವ ಫಲಕಗಳು — ಮುಂತಾದವುಗಳ ಸ್ಥಾಪನೆ ಆಗಬೇಕು. ಉಡುಪಿಯಲ್ಲಿಯೇ ದೇವಸ್ಥಾನದ ಹೊರಭಾಗದಲ್ಲಿ ಆಚಾರ್ಯರು ಸಂದರ್ಶಿಸಿದ ಸ್ಥಳಗಳ ಮಾಹಿತಿ ನೀಡುವ ಒಂದು ಫಲಕ ಸ್ಥಾಪಿಸಬೇಕು. ಅದರಲ್ಲಿ ಆಯಾ ಸ್ಥಳಕ್ಕೆ ಹೋಗಲು ಬಸ್ ವ್ಯವಸ್ಥೆ, ಅಲ್ಲಿಯ ಪೂಜಾ ವ್ಯವಸ್ಥೆ — ಮುಂತಾದವುಗಳ ಮಾಹಿತಿ ಇರಬೇಕು. ಆಚಾರ್ಯರ ಬಾಲ್ಯದಿಂದ ಅದೃಶ್ಯರಾಗಿರುವ ವರೆಗಿನ ಜೀವನಚರಿತ್ರೆಯ ಬಗ್ಗೆ, ಸಂದೇಶಗಳ ಬಗ್ಗೆ ತಿಳಿಸುವಂತಹ ಭಿತ್ತಿಚಿತ್ರಗಳು ಅಲ್ಲಿ ಇರಬೇಕು.

ಅನೇಕ ರಸ್ತೆಗಳಿಗೆ ಶ್ರೀಮದಾಚಾರ್ಯರ ಹಾಗೂ ಅವರ ಶಿಷ್ಯರ ಹೆಸರುಗಳನ್ನು ಇಡಬೇಕು.

ಹೀಗೆ ಆಚಾರ್ಯರ ಹೆಸರಲ್ಲಿ ಸ್ಮಾರಕಗಳ ನಿರ್ಮಾಣ ವ್ಯಾಪಕವಾಗಿ ಆಗ ಬೇಕಾಗಿದೆ.

—ಬೆಳೆ ರಂಗಪ್ಪ ಸುಧೀಂದ್ರ, ಬೆಂಗಳೂರು

x x x x x

## ಹೃದಯಸ್ಪರ್ಶಿ ಪ್ರವಚನಗಳು

ಪಲಿಮಾರು ಮಠದ ಕಿರಿಯ ಶ್ರೀಪಾದರು ಭಕ್ತವೃಂದವನ್ನು ಸದಾ ಹಸನ್ಮುಖದಿಂದ ವಿಚಾರಿಸುತ್ತಿದ್ದುದು, ಯಮಕಭಾರತದ ಪ್ರವಚನ ಹಾಗೂ ಶ್ರೀ ಪ್ರಭಂಜನಾಚಾರ್ಯರ ಸುಮಧ್ವವಿಜಯದ ಪ್ರವಚನ—ತುಂಬ ಹೃದಯಸ್ಪರ್ಶಿಯಾಗಿತ್ತು.

ಸಂದರ್ಶಿಸಿದ ಸ್ಥಳಗಳಲ್ಲೆಲ್ಲ ಸದಾ ನೆನಪಿನಲ್ಲಿ ಉಳಿಯಬಲ್ಲ ಸ್ಥಳವೆಂದರೆ ಕೊಡಿಪ್ಪಾಡಿಯ ಜನಾರ್ದನ ದೇವಾಲಯ.

ಇನ್ನು ಮುಂದೆಯೂ ಇಂತಹ 'ಮಧ್ವಯಾತ್ರೆ' ಆಗುತ್ತಿರಲಿ!

— ಕೆ. ಎಸ್. ಅಚ್ಯುತ ಬಲ್ಲಾಳ, ಕುಕ್ಕಿಕಟ್ಟೆ, ಉಡುಪಿ

x x x x x

## ಸ್ವಪ್ನದಲ್ಲಿ ಶ್ರೀ ಮಧ್ವರ ದರ್ಶನದ ಸೌಭಾಗ್ಯ

ಹಿಂದೆ ನಾವು ಬರೇ ಸುಮಧ್ವವಿಜಯ ಓದಿ ಅಥವಾ ಕೇಳಿ ಯಾವ ಸ್ಥಳಗಳ ಮಹಾತ್ಮೆಯನ್ನು ತಿಳಿದುಕೊಂಡಿದ್ದೇವೋ ಅಂತಹ ಸ್ಥಳಗಳನ್ನು ಪ್ರತ್ಯಕ್ಷವಾಗಿ ಕಂಡಾಗ ನಮಗೆ ಆದ ಆನಂದ ಅಷ್ಟಿಷ್ಟಲ್ಲ.

ನಾವು ಸುತ್ತಾಡಿದ ಸ್ಥಳಗಳು ಪರಮಪವಿತ್ರ ಕ್ಷೇತ್ರಗಳು. ಶ್ರೀ ಮಧ್ವರ ಪಾದಧೂಳಿಯಿಂದ ಪುನೀತವಾದವು. ಕೆಲವು ಕಡೆ ಚಾತುರ್ಮಾಸ್ಯ ನಡೆಸಿದ್ದಾರೆ, ಇನ್ನು ಕೆಲವು ಕಡೆ ಗ್ರಂಥರಚನೆ, ಮತ್ತೆ ಕೆಲವೆಡೆ ದುರ್ವಾದಿಗಳನ್ನು ಸೋಲಿಸಿದ್ದಾರೆ. ಇನ್ನು ಕೆಲವೆಡೆ ಪುಷ್ಕರಿಣಿಗಳಲ್ಲಿ ನೀರು ತುಂಬಿಸಿದ್ದಾರೆ.......ಹೀಗೆ ಶ್ರೀಮದಾಚಾರ್ಯರು ಬೇರೆ ಬೇರೆ ಬಗೆಯ ಮಹಿಮೆಗಳನ್ನು ತೋರಿಸಿದ್ದ ಕ್ಷೇತ್ರಗಳು ಅವು.

ಮಧೂರಿನಲ್ಲಿ ವಾಸ್ತವ್ಯ ಹೂಡಿ, ರಾತ್ರಿ ಮಲಗಿದ್ದಾಗ ಸ್ವಪ್ನದಲ್ಲಿ ಶ್ರೀಮದಾಚಾರ್ಯರೇ ನನಗೆ ಕಾಣಿಸಿಕೊಂಡದ್ದರಿಂದ ಈ ಯಾತ್ರೆ ನನ್ನ ಪಾಲಿಗೆ ಇನ್ನಷ್ಟು ಸಾರ್ಥಕವೆನಿಸಿದೆ.

— ಹೆಚ್. ಕೆ. ಸಾವಿತ್ರಮ್ಮ, ಬಸವನಗುಡಿ, ಬೆಂಗಳೂರು

x x x x x

## ಕ್ಷೇತ್ರಗಳು ಕಣ್ಣಮುಂದೆ ಇನ್ನೂ ನಿಂತಿವೆ

1989ರಲ್ಲಿ ಭಕ್ತಿರಥದೊಡನೆ ಬದರಿಯಾತ್ರೆಗೆ ತೆರಳಿದ ಭಕ್ತವೃಂದದಲ್ಲಿ ನಾವೂ ಸೇರಿದ್ದೆವು. ಆ ಯಾತ್ರೆಯಲ್ಲಿ ಅನುಭವಿಸಿದ್ದನ್ನೇ ಈ ಯಾತ್ರೆಯಲ್ಲಿಯೂ ಅನುಭವಿಸಿದಂತಾಗಿದೆ.

ಯುಗಪುರುಷರಾದ ಪಲಿಮಾರು ಮಠದ ಶ್ರೀ ವಿದ್ಯಾಮಾನ್ಯತೀರ್ಥರು ತಮ್ಮ ಶಿಷ್ಯರೊಡನೆ ಶ್ರೀ ಮಧ್ವರ ಸ್ನಾನದಲ್ಲಿ ನಿಂತು ನಮ್ಮನ್ನೆಲ್ಲ ಕರೆದೊಯ್ದು ದರ್ಶನೀಯ ಸ್ಥಳಗಳ ದರ್ಶನ ಮಾಡಿಸಿದ್ದು, ಅಲ್ಲಿಯ ಮಹಿಮೆಯನ್ನು ಅದೇ ಸ್ಥಳದಲ್ಲಿ ವರ್ಣಿಸಿದ್ದು ತುಂಬ ಆನಂದವನ್ನುಂಟುಮಾಡಿದೆ.

ಶ್ರೀ ಸುಮಧ್ವವಿಜಯದ ಆಧಾರದ ಮೇಲೆ ಶ್ರೀ ಪ್ರಭಂಜನಾಚಾರ್ಯರು ಶ್ರೀ ಮಧ್ವರ ಮಹಿಮೆಗಳನ್ನು ಹಾಗೂ ಆಯಾ ಕ್ಷೇತ್ರಗಳನ್ನು ತಮ್ಮ ಪ್ರವಚನಗಳಲ್ಲಿ ಹೃದಯದ್ರಾವಕವಾಗಿ ನಿರೂಪಿಸುತ್ತಿದ್ದುದು ನಮ್ಮ ಕಿವಿಯಲ್ಲಿ ಇಂದೂ ಝೇಂಕರಿಸುತ್ತಿದೆ; ಕ್ಷೇತ್ರಗಳು ಕಣ್ಣಮುಂದೆ ನಿಂತಿವೆ.

— ಡಿ. ಎಸ್. ಬಿಂದುಮಾಧವ ರಾವ್
— ಡಿ. ಬಿ. ನರ್ಮದಾಬಾಯಿ

x x x x x

## ಪ್ರಯಾಣದ ವೇಳೆಯಲ್ಲಿಯೂ ಕಾಲ ವ್ಯರ್ಥವಾಗಿಲ್ಲ

ಸುಮಧ್ವವಿಜಯದಲ್ಲಿರುವ ಸಂಗತಿಗಳನ್ನು ಕಣ್ಣಿನಿಂದ ನೋಡಿ, ಕಿವಿಯಿಂದ ಕೇಳಿ, ಮಧ್ವರು ನಡೆದಾಡಿದ ಸ್ಥಳದಲ್ಲಿ ಹೊರಳಾಡಿ ಅವರ ಪಾದಧೂಳಿಯನ್ನು ಶಿರಸ್ಸಿನಲ್ಲಿ ಧರಿಸಿದಾಗ ನನ್ನ ಮೈ ರೋಮಾಂಚನವಾಗುತ್ತಿತ್ತು. ಭಕ್ತಿಯು ಅಧಿಕವಾಗಿ ಆನಂದಬಾಷ್ಪ ಸುರಿಯುತ್ತಿತ್ತು.

ಅನೇಕ ಕಡೆ ಸ್ಥಳೀಯ ಸಮಿತಿಯವರು ನೀಡಿದ ಸತ್ಕಾರ ಮರೆಯಲು ಸಾಧ್ಯವಿಲ್ಲದ್ದು.

ಪ್ರಯಾಣದ ವೇಳೆಯಲ್ಲಿಯೂ ನಾವು ವೃಥಾ ಕಾಲ ಕಳೆಯುತ್ತಿರಲಿಲ್ಲ. ಆಗಲೂ ಸಹ ಹಿರಿಯರಿಂದ ಪ್ರವಚನಗಳು, ಮಾತೆಯರಿಂದ ನೂರಾರು ದೇವರ ನಾಮಗಳು ಕಿವಿಗೆ ಬೀಳುತ್ತಿದ್ದು ಜನ್ಮ ಸಾರ್ಥಕವೆನಿಸುತ್ತಿತ್ತು. ನಾವು ಎಪ್ಪತ್ತು ಮಂದಿ ಒಂದು ಕುಟುಂಬದವರಂತೆ ಸದಾ ಕಾಲ ಸಂತೋಷದಿಂದ ಇದ್ದದ್ದು ಬಹಳ ವಿಶೇಷ.

— ಟಿ. ವಿ. ಶ್ರೀನಿವಾಸಮೂರ್ತಿ, ಬೆಂಗಳೂರು

x x x x x

## ಶ್ರೀ ಮಧ್ವರೇ ಅದೃಶ್ಯರಾಗಿದ್ದುಕೊಂಡು ಅನುಗ್ರಹಿಸಿದರು

ಯಾತ್ರೆಯಲ್ಲಿ ಮನೆಯ ಯಾವ ಯೋಚನೆಯೂ ಇಲ್ಲದೆ ಸ್ನಾನ, ಪತಿಸೇವಾ – ಗುರುಮಂತ್ರ ಜಪ – ದೇವರ ನಾಮ – ತೀರ್ಥಪ್ರಸಾದ – ಯತಿಗಳ ದರ್ಶನ – ಕ್ಷೇತ್ರಮೂರ್ತಿಗಳ ದರ್ಶನ – ಹೀಗೆ ಬೆಳಗಿನಿಂದ ರಾತ್ರಿ ಮಲಗುವ ವರೆಗೂ ಆಧ್ಯಾತ್ಮಿಕ ಪ್ರಪಂಚದಲ್ಲಿಯೇ ಮುಳುಗುವಂತಾಗಿತ್ತು.

ಶ್ರೀ ಮಧ್ವರೇ ಈ ಯಾತ್ರೆಯಲ್ಲಿ ನಮ್ಮೊಡನೆ ಅದೃಶ್ಯರಾಗಿದ್ದುಕೊಂಡು ಯತಿಗಳ ಮೂಲಕ, ಪೂಜ್ಯ ಪಂಡಿತರ ಮೂಲಕ ನಮಗೆ ಅನುಗ್ರಹಿಸಿದರೆಂದು ನನ್ನ ಭಾವನೆ.

— ಶ್ರೀಮತಿ ಟಿ. ಎಸ್. ಕಮಲಾಬಾಯಿ ಬೆಂಗಳೂರು

x x x x x

## ನಮ್ಮಿಂದಷ್ಟೇ ಆಗದ ಯಾತ್ರೆ

ಬರೇ ನಮಗೆ ಈ ಯಾವುದೇ ಸ್ಥಳಕ್ಕೆ ಹೋಗಲು ಆಗುತ್ತಿದ್ದಿಲ್ಲ. ಒಂದ ವೇಳೆ ಹೋದರೂ, ಅಲ್ಲಿಯ ಮಹಿಮೆಯನ್ನು ಚೆನ್ನಾಗಿ ತಿಳಿದುಕೊಳ್ಳಲಾಗುತ್ತಿದ್ದಿಲ್ಲ. ಶ್ರೀಪಾದಂಗಳವರ, ವಿದ್ವಾಂಸರ ಜೊತೆಗೆ ಹೋದದ್ದರಿಂದ ಯಾತ್ರೆ ನಿಜವಾಗಿಯೂ ಚೆನ್ನಾಗಿತ್ತು.

— ಡಾ। ಕೆ. ಪ್ರಭಾಕರ ರಾವ್, ಬೆಂಗಳೂರು

  

# ಪಾವನಯಾತ್ರೆಯಲ್ಲಿ ಪಾಲ್ಗೊಂಡ ಸಾಧಕರು

ಮಠಾಧಿಪತಿಗಳೂ, ವಿದ್ವಾಂಸರೂ ಸೇರಿದಂತೆ ನೂರಕ್ಕಿಂತಲೂ ಅಧಿಕ ಸಾಧಕರ ಸಮಾವೇಶದೊಂದಿಗೆ ನಡೆದ 'ಪಾವನಯಾತ್ರೆ'ಯಲ್ಲಿ ಪಾಲ್ಗೊಂಡ ಹೆಚ್ಚಿನ ಮಹನೀಯರು ದೊಡ್ಡ ದೊಡ್ಡ ಹುದ್ದೆಯಲ್ಲಿ ಉದ್ಯೋಗದಲ್ಲಿ ತೊಡಗಿದವರು. ಹಳ್ಳಿಗಳಲ್ಲಷ್ಟೇ ನಡೆಯುವ 'ಪಾವನಯಾತ್ರೆ'ಯಲ್ಲಿ ಆಧುನಿಕ 'ಪಿಕ್ನಿಕ್ಕ'ನ ಛಾಯೆ ಸುಳಿಯಲಾರದೆಂದು ತಿಳಿದಿದ್ದರೂ ಶ್ರೀಮದಾಚಾರ್ಯರ ಬಗೆಗಿನ ಗೌರವ ಭಾವನೆಯಿಂದಷ್ಟೇ ಯಾತ್ರೆಯಲ್ಲಿ ಭಾಗವಹಿಸಿದ ಮಹನೀಯರ ಮಾಹಿತಿಯೂ ಉಳಿದವರಿಗೆ ಸ್ಫೂರ್ತಿಪ್ರದ. ಅದಕ್ಕಾಗಿ ಯಾತ್ರೆಯಲ್ಲಿ ಪಾಲ್ಗೊಂಡ ಎಲ್ಲ ಸಾಧಕರ ವಿಳಾಸ, ಉದ್ಯೋಗಾದಿ ಮಾಹಿತಿಯನ್ನು ಇಲ್ಲಿ ನೀಡಲಾಗಿದೆ. ಪೂರ್ಣಮಾಹಿತಿ ದೊರಕದ ಕೆಲವು ಯಾತ್ರಿಕರ ಬಗ್ಗೆ ಸಿಕ್ಕ ಮಾಹಿತಿಯನ್ನಷ್ಟೇ ನಿಸ್ಸಹಾಯಕತೆಯಿಂದ ನೀಡುವಂತಾಗಿದೆ.

ಯಾತ್ರೆಯಲ್ಲಿ ಪಾಲ್ಗೊಂಡ ಸಾಧಕರಿಗೂ ಹರಿಗುರುಗಳ ಅನುಗ್ರಹದಿಂದಾಗಿ ತಮ್ಮ ಜೀವನದಲ್ಲಿ ನಡೆದ ಸಾಧನೆಯ ಉಲ್ಲೇಖ ಆತ್ಮವಿಶ್ವಾಸವನ್ನು ತುಂಬುವುದಕ್ಕೆ ಉಪಯುಕ್ತವಾಗಬಲ್ಲದೆಂದು ನಿರೀಕ್ಷಿಸಲಾಗಿದೆ.

೧) ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥರು—ಪಲಿಮಾರು ಭಂಡಾರಕೇರಿ ಮಠಾಧೀಶರು, ಉಡುಪಿ.

೨) ಶ್ರೀ ಶ್ರೀ ವಿಶ್ವೇಶತೀರ್ಥರು—ಪೇಜಾವರ ಮಠಾಧೀಶರು, ಉಡುಪಿ.

೩) ಶ್ರೀ ಶ್ರೀ ವಿದ್ಯಾಧೀಶತೀರ್ಥರು—ಪಲಿಮಾರು ಮಠಾಧೀಶರು, [ಕಿರಿಯ ಪಟ್ಟ]

೪) ಡಾ। ವ್ಯಾಸನಕೆರೆ ಪ್ರಭಂಜನಾಚಾರ್ಯರು—[ಸರ್ಕಾರಿ ಕಲಾ ಮತ್ತು ವಿಜ್ಞಾನ ಕಾಲೇಜು, ಬೆಂಗಳೂರು, ಇದರಲ್ಲಿ ಸಂಸ್ಕೃತ ವಿಭಾಗದ ಮುಖ್ಯಸ್ಥರು) ಪಾಜಕ ನಂ. 67, 50 ಅಡಿರಸ್ತೆ, ಹನುಮಂತನಗರ, ಬೆಂಗಳೂರು—560019

೫) ಸಗ್ರಿ ರಾಘವೇಂದ್ರ ಉಪಾಧ್ಯಾಯ—(ಸಂಸ್ಕೃತ ಮಹಾವಿದ್ಯಾಲಯ, ಉಡುಪಿ ಇಲ್ಲಿ ವೇದಾಂತ ಸಹಪ್ರಾಧ್ಯಾಪಕರು) 'ವಿಟ್ಠಲನಿವಾಸ' ಮೂಡುಸಗ್ರಿ, ಕುಂಜಿಬೆಟ್ಟು ಉಡುಪಿ—576102.

೬) ಸತ್ಯೇಶಾಚಾರ್ಯರು—[ನಿವೃತ್ತ ಅಧಿಕಾರಿ, ಅಕೌಂಟೆಂಟ್, ಜನರಲ್ ಕಛೇರಿ, ಬೆಂಗಳೂರು] ನಂ. 496, 16ನೇ ಮುಖ್ಯರಸ್ತೆ, ಶ್ರೀನಗರ ದ್ವಾರ, B. S K. ಅಂಚೆ 1ನೇ ಘಟ್ಟ, ಬೆಂಗಳೂರು—560050

೭) ಪಿ. ವಿ. ಆರ್. ಕೆ. ಪ್ರಸಾದ್—(ತಿರುಪತಿ ತಿರುಮಲೈ ದೇವಾಲಯದ ಅಧಿಕಾರಿಗಳಾಗಿ ಸೇವೆ ಸಲ್ಲಿಸಿದ ಹಾಗೂ ಆಗಿನ ಭಾರತದ ಪ್ರಧಾನ ಮಂತ್ರಿಗಳಿಗೆ ವಾರ್ತಾ ಸಲಹೆಗಾರರಾಗಿ ಸೇವೆಸಲ್ಲಿಸಿದ, ಐ. ಎ. ಎಸ್ ಅಧಿಕಾರಿಗಳು) ಸೌತ್‌ಬ್ಲಾಕ್, ನವದೆಹಲಿ, ದೂ. ನಂ. 3015563.

೮) ಮೋಹನ್ ಕೌಜಲಗಿ—[ಆಪ್ತ ಕಾರ್ಯದರ್ಶಿ, ಅಡಿಶನಲ್ ಸೆಕ್ರಟರಿ, ಕರ್ನಾಟಕ ಸರ್ಕಾರ ಇವರಿಗೆ] ನಂ. 26, ವಾಣಿವಿಲಾಸ ರಸ್ತೆ, ಬಸವನ ಗುಡಿ, ಬೆಂಗಳೂರು—560004, ದೂರವಾಣಿ-606954

೯) ವಸಂತಕುಮಾರ್ ಪರಗಿ—[ನಿವೃತ್ತ ಜನರಲ್ ಮ್ಯಾನೇಜರ್, ವಿಷ್ಣು ಸಿಮೆಂಟ್ಸ್ ಕಂಪೆನಿ] ನಂ. 2/27, 47ನೇ ಅಡ್ಡರಸ್ತೆ, 8ನೇ ಬ್ಲಾಕ್, ಜಯನಗರ ಬೆಂಗಳೂರು-560011, ದೂರವಾಣಿ: 6643904.

೧೦. ಆರ್. ಎನ್. ಸಿಂಹ—[ಹಿರಿಯ ಲೆಕ್ಕಾಧಿಕಾರಿ, ಇಂಡಸ್ಟ್ರಿಯಲ್, ಕೆಮಿಕಲ್ಸ್ ಅಂಡ್ ಅಲೈಡ್ ಲೈನ್ಸ್, ಬೆಂಗಳೂರು] ನಂ. 1644, 'ನರಹರಿನಿಲಯ' 7ನೇ ಕ್ರಾಸ್, 18ನೇ ಮೈನ್, ಮುನೇಶ್ವರ ಬ್ಲಾಕ್ ಬೆಂಗಳೂರು-560026

೧೧) ಯು. ಡಿ. ನಾಗರಾಜ—[ಮಾಲೀಕರು, ವಾಯು ಅಸೋಸಿಯೇಟ್ಸ್, ಬೆಂಗಳೂರು] ನಂ. 53, 'ಸತ್ಯಸಂಕಲ್ಪ' ಅಣ್ಣಯ್ಯಪ್ಪ ಲೇಔಟ್, ಜೆ.ಪಿ. ನಗರ, ಬೆಂಗಳೂರು-560076, ದೂರವಾಣಿ: 6656562.

೧೨) ಚತುರ್ವೇದಿ ಗುರುರಾವ್—[ನಿವೃತ್ತ ಇನ್ಸ್‌ಪೆಕ್ಟರ್, ಇ. ಎಸ್. ಐ] ನಂ. 38/5 ರಾಘವೇಂದ್ರ ಕಾಲೋನಿ, ಚಾಮರಾಜ ಪೇಟೆ, ಬೆಂಗಳೂರು.

೧೩) ಎಂ. ಎನ್. ಶ್ರೀನಿವಾಸ ರಾವ್—[ಮ್ಯಾನೇಜರ್, ಕಂಪ್ಯೂಟರ್ ವಿಭಾಗ, ಎಚ್. ಎ. ಎಲ್. ಬೆಂಗಳೂರು] ನಂ. 61, 3ನೇ ಕ್ರಾಸ್, ಶ್ರೀ ರಾಘವೇಂದ್ರ ಕಾಲೋನಿ, ಚಾಮರಾಜ ಪೇಟೆ, ಬೆಂಗಳೂರು-560018.

೧೪. ಕೆ. ಎಸ್. ಸತ್ಯನಾರಾಯಣ ರಾವ್—[ನಿವೃತ್ತ ಹಣಕಾಸು ಅಧಿಕಾರಿ, ಭಾರತೀಯ ದೂರವಾಣಿ ಕಾರ್ಖಾನೆ, ಬೆಂಗಳೂರು] ನಂ. 20, 6ನೇ ಪ್ಯಾರಲಲ್ ರಸ್ತೆ, ಚಾಮರಾಜ ಪೇಟೆ, ಬೆಂಗಳೂರು, ದೂರವಾಣಿ-6621726.

೧೫. ರಮೇಶ್ ಎಚ್. ಕೆ.—[ಇನ್ಸ್‌ಪೆಕ್ಟರ್ ಗ್ರಾಫೈಟ್ ಇಂಡಿಯಾ ಲಿ. ಬೆಂಗಳೂರು] ನಂ. 553, 4ನೇ ಕ್ರಾಸ್, B. S. K. I. ಸ್ಟೇಜ್, 2ನೇ ಫೇಸ್, ಬೆಂಗಳೂರು—560050.

೧೬. ಎಚ್. ಎಸ್. ಶ್ಯಾಮಸುಂದರ್—[ಉನ್ನತ ದರ್ಜೆ ಗುಮಾಸ್ತ, ಸಿ. ಎಂ. ಜಿ. ಪಿ. ಬೆಂಗಳೂರು] ನಂ. 11, 4ನೇ N ಬ್ಲಾಕ್, ರಾಜಾಜಿನಗರ, ಬೆಂಗಳೂರು—560010.

೧೭. ಸಿ. ಆರ್. ಮುರಳಿ—[ಉಪಾಧ್ಯಕ್ಷರು ಎಸ್. ಎಂ. ಫೈನಾನ್ಸ್, ಲಿ. ಬೆಂಗಳೂರು] 151, 'ವಾತ್ಸಲ್ಯ' ಕತ್ರಿಗುಪ್ಪಾ, BSK IIIನೇ ಹಂತ, ಬೆಂಗಳೂರು-560085 ದೂರವಾಣಿ-6692928.

೧೮) ಕೆ. ಎನ್. ಪ್ರಹ್ಲಾದರಾವ್— ನಂ. 190 1ನೇ ಬ್ಲಾಕ್, 1ನೇ ಕ್ರಾಸ್, ಬೈರ ಸಂದ್ರ, ಜಯನಗರ, ಬೆಂಗಳೂರು.

೧೯) ಟಿ. ವಿ. ಶ್ರೀನಿವಾಸಮೂರ್ತಿ—[ಪುರೋಹಿತರು, ಬೆಂಗಳೂರು] 203, 'ಭಾರದ್ವಾಜ' 5ನೇ ಮುಖ್ಯರಸ್ತೆ, ಚೆನ್ನಮ್ಮನ ಕೆರೆ, ಅಚ್ಚುಕಟ್ಟೆ BSK III ಹಂತ, ಬೆಂಗಳೂರು-560085.

೨೦) ಸಿ. ವಿ. ಪಿ. ಆಚಾರ್ಯ—(ಸಹಾಯಕ ನಿರ್ದೇಶಕರು, ಕೈಗಾರಿಕಾ ಮತ್ತು ವಾಣಿಜ್ಯ ನಿಗಮ] ನಂ. 21 3ನೇ ಅಡ್ಡರಸ್ತೆ, ಸ. ರಾ. ಕಾಲೋನಿ, ಬೆಂಗಳೂರು-56019, ದೂರವಾಣಿ—621543.

೨೧) ಬೆಳೆ ರಂಗಪ್ಪ ಸುಧೀಂದ್ರ—[ಸಹಾಯಕ ಸಿ. ಎಂ. ಟಿ. ಪಿ. ಬೆಂಗಳೂರು] 'ಸರ್ವಮೂಲ' ನಂ. 777, 15ನೇ ಮುಖ್ಯರಸ್ತೆ, 6ನೇ ಅಡ್ಡರಸ್ತೆ, ಶ್ರೀನಿವಾಸ ನಗರ, 2ನೇ ಹಂತ, BSKI ಬೆಂಗಳೂರು—560050

೨೨) ಡಾ. ಪ್ರಭಾಕರ ರಾವ್—[ಸಹಾಯಕರು ಸೆಂಟ್ರಲ್ ಕಾಲೇಜು ಬೆಂಗಳೂರು] 4/1, ಗ್ರಾಮದೇವತಾ ಕ್ರಾಸ್, ಚಿಕ್ಕಮಾವಳ್ಳಿ, ಬೆಂಗಳೂರು—560004.

೨೩) ನಾಗರಾಜ ರಾವ್—[ಮಾಲಿಕರು ರಾವ್ ಮತ್ತು ಕಂ. ಶೇರ್ ಬ್ರೋಕರ್ಸ್ ಬೆಂಗಳೂರು] 'ಮಾಧವನಿವಾಸ' ನಂ. 1330, 7ನೇ ಮುಖ್ಯರಸ್ತೆ ಗಿರಿ ನಗರ, ಬೆಂಗಳೂರು—56000.

೨೪) ಹರಿಯಾಚಾರ್ಯ ಒ. ಬಿ.—[ನಿವೃತ್ತ ಅಧಿಕಾರಿ, ಆದಾಯ ತೆರಿಗೆ ಇಲಾಖೆ, ಬೆಂಗಳೂರು] ನಂ. 1281 'ಆನಂದ' 8ನೇ ಸಿ' ಕ್ರಾಸ್, 1ನೇ F. ಮುಖ್ಯರಸ್ತೆ, ಗಿರಿನಗರ, ಬೆಂಗಳೂರು—560085.

೨೫) ಎ. ವೈ. ಕಟಗೆರೆ—[ಸಹಾಯಕ ನಿರ್ದೇಶಕರು, ಟೆಲಿಕಮ್ಯೂನಿಕೇಷನ್ ವಿಭಾಗ, ಹುಬ್ಬಳ್ಳಿ] ಕೇಶವಪುರ ಹುಬ್ಬಳ್ಳಿ—23, ದೂರವಾಣಿ—43250.

೨೬) ಜಿ. ಎನ್. ಇನಂದಾರ್—[ನಿವೃತ್ತ ಜಿಲ್ಲಾ ಟ್ರೆಜರಿ ಅಧಿಕಾರಿ ಧಾರವಾಡ] ಸ್ಟೇಷನ್ ರಸ್ತೆ, 4ನೇ ಕ್ರಾಸ್, ಮಾಳಮಡ್ಡಿ ಧಾರವಾಡ.

೨೭) ಡಾ। ವಿ. ಎಚ್. ಕುಲಕರ್ಣಿ—[ಪ್ರೊಫೆಸರ್, ಆರ್ಗ್ಯಾನಿಕ್ ಕೆಮಿಸ್ಟ್ರಿ, ಗುಲ್ಬರ್ಗ ವಿಶ್ವವಿದ್ಯಾಲಯ] 'ವಿಜಯವಾಣಿ' S.B.H. ಕಾಲೋನಿ, ನೆಹರುಗುಂಜಾ, ಗುಲ್ಬರ್ಗ—585104, ದೂರವಾಣಿ: 23217

೨೮) ರುಕ್ಮಾಂಗದ ಆಚಾರ್ಯ—[ವಕೀಲರು, ಬೆಂಗಳೂರು] ಎನ್. ಆರ್. ಕಾಲೋನಿ] ಬೆಂಗಳೂರು—560019.

೨೯) ಬಿ. ಆರ್. ರವೀಂದ್ರ (ಇಂಜಿನಿಯರ್ ಯುಕೇನ್ ಇಂಡಿಯಾ ಲಿ.) 3343 13ನೇ ಮುಖ್ಯ ರಸ್ತೆ, 6ನೇ ಕ್ರಾಸ್ HAC IIನೇ ಹಂತ ಬೆಂಗಳೂರು—560008

೩೦) ಎಂ. ಆರ್. ರಂಗನಾಥ್—ನಿವೃತ್ತ ಪ್ರಾಂಶುಪಾಲರು, ಆಚಾರ್ಯ ಪಾಠಶಾಲಾ ಕಾಲೇಜು, ಬೆಂಗಳೂರು] ನಂ. 81, ITI ಲೇ ಔಟ್, BSK IIIನೇ ಹಂತ, ಬೆಂಗಳೂರು—560085, ದೂರವಾಣಿ 6690910

೩೧) ಎಲ್. ಸತ್ಯನಾರಾಯಣ ರಾವ್—ನಂ. 194/15 ಶ್ರೀನಿಕೇತನ 36ನೇ 'ಬಿ'ಕ್ರಾಸ್ 7ನೇ ಬ್ಲಾಕ್, ಜಯನಗರ ಬೆಂಗಳೂರು-560011.

೩೨) ಆರ್. ಗುರುಪ್ರಸಾದ್—ನಂ. 1, 1ನೇ ಕ್ರಾಸ್, ಕೆ. ಜಿ. ನಗರ, ಗವಿಪುರ, ಗುಟ್ಟಹಳ್ಳಿ ಬೆಂಗಳೂರು—560019

೩೩) ಎಚ್. ಎನ್. ವೆಂಕಟೇಶ್—[ಸ್ವಂತ ಉದ್ಯೋಗ, ಆಟೋಮೋಬೈಲ್ಸ್, 'ಶ್ರೀನಿವಾಸ ಗ್ಯಾರೇಜ್, ಕತ್ತರಿಗುಪ್ಪ ಮುಖ್ಯರಸ್ತೆ, ಬೆಂಗಳೂರು-560085, ದೂರವಾಣಿ-620189.

೩೪) ಎಚ್. ಟಿ. ಮಾಧವಮೂರ್ತಿ—'ಗೋಕುಲ' ನಂ. 142/1 2ನೇ ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು-560018.

೩೫) ಎಮ್. ಎಸ್. ಕೃಷ್ಣಮೂರ್ತಿ—235/F63, 5ನೇ ಕ್ರಾಸ್, ಕೆ. ಜಿ. ನಗರ, ಬೆಂಗಳೂರು—560019.

೩೬) ಡಿ. ವಿಜಯ ವಿಠ್ಠಲ ರಾವ್—ನಂ. 60, 4ನೇ ಮುಖ್ಯರಸ್ತೆ, ಚಾಮರಾಜಪೇಟೆ ಬೆಂಗಳೂರು-560018

೩೭) ಕೆ. ಶ್ರೀನಿವಾಸನ್—ನಂ. 972, 16ನೇ ಮುಖ್ಯರಸ್ತೆ, 13ನೇ ಕ್ರಾಸ್, **BSK** 2ನೇ ಹಂತ ಬೆಂಗಳೂರು-560070.

೩೮) ಟಿ. ಆರ್. ಆಚಾರ್ಯ—14-1, 3ನೇ ಮೈನ್, ಎನ್. ಆರ್. ಕಾಲೋನಿ ಬೆಂಗಳೂರು.

೩೯) ಪಿ. ಬಿ. ಶೆಟ್ಟಿ—[ಅಧಿಕಾರಿ, ಯೂನಿಯನ್ ಬ್ಯಾಂಕ್ ಆಫ್ ಇಂಡಿಯಾ, ಬೆಂಗಳೂರು] 91 'A' 22ನೇ ಕ್ರಾಸ್, 2ನೇ 'ಡಿ' ಬ್ಲಾಕ್, ರಾಜಾಜಿನಗರ, ಬೆಂಗಳೂರು-560010, ದೂರವಾಣಿ:646647

೪೦) ಬಿ. ಸುಬ್ಬಣ್ಣಾಚಾರ್ಯ—[ನಿವೃತ್ತ ಮುಖ್ಯೋಪಾಧ್ಯಾಯ], ಉಡುಪಿ.

೪೧) ಎಸ್. ಕೆ. ಆಚಾರ್ಯ—[ನಿವೃತ್ತ ಮ್ಯಾನೇಜರ್, ಸಿಂಡಿಕೇಟ್ ಬ್ಯಾಂಕ್] 'ಶ್ರೀಕೃಪಾ' ಅಂಬಲಪಾಡಿ ಉಡುಪಿ-576103

೪೨) ಎಸ್. ಬಿಂದು ಮಾಧವ ರಾವ್—(ನಿವೃತ್ತ ಡೆಪ್ಯುಟಿ ಕಲೆಕ್ಟರ್) 3 ನೀಲಿ ವೀರ ಸ್ವಾಮಿ ರಸ್ತೆ ಟ್ರಿಪ್ಲಿಕೇನ್ ಮದ್ರಾಸ್—600005.

೪೩) ವಾದಿರಾಜ ಉಪಾಧ್ಯಾಯ—[ವೀಡಿಯೋ ಗ್ರಾಫರ್, ಸ್ವಂತ ಉದ್ಯೋಗ—ಯಾತ್ರೆಯ ವೀಡಿಯೋ ತೆಗೆದವರು] 158/A 26ನೇ ಕ್ರಾಸ್, 38ನೇ ಮುಖ್ಯರಸ್ತೆ BSK 2ನೇ ಹಂತ, ಬೆಂಗಳೂರು—560070 ದೂರವಾಣಿ: 625315.

೪೪) ಡಾ. ಜಿ. ಎನ್. ಕುಲಕರ್ಣಿ(ಇಂಜಿನಿಯರ್) 'ಶ್ರೀನಿಕೇತನ' 3ನೇ ಕ್ರಾಸ್ ಪ್ರಹ್ಲಾದ ನಿಲಯದ ಹತ್ತಿರ ಮಾಳಮಡ್ಡಿ ಧಾರವಾಡ-7, ದೂರವಾಣಿ:40411

೪೫) ಜನಾರ್ದನ ಶೆಟ್ಟಿ—(ಎಕ್ಸಿಕ್ಯೂಟಿವ್ ಇಂಜನಿಯರ್) ಸಂತೋಷ್ ಕಾಲೋನಿ, ಅನ್‌ದೂರ್ ರಸ್ತೆ, ಪ್ಲಾಟ್ ನಂ 24, ಗುಲ್ಬರ್ಗಾ-585102.

೪೬) **ಪರಾಂಡೆ**—(ನಿವೃತ್ತ ಅಧಿಕಾರಿ ಅಕೌಂಟೆಂಟ್, ಜನರಲ್ ಕಛೇರಿ, ಬೆಂಗಳೂರು) ರವೀಂದ್ರನಾಥ ಟಾಗೋರ್ ನಗರ ಬೆಂಗಳೂರು.

೪೭) **ಶೇಷಗಿರಿ ರಾವ್**—(ನಿವೃತ್ತ ಅಧಿಕಾರಿ ಮಲ್ಲೇಶ್ವರಂ ಕೋ ಆಪರೇಟಿವ್ ಬ್ಯಾಂಕ್ ಬೆಂಗಳೂರು] ಬೆಂಗಳೂರು.

೪೮) **ಕೆ. ಎಸ್. ಅಚ್ಯುತ ಬಲ್ಲಾಳ**—'ಹರಿಗುರುನಿಲಯ' ಕುಕ್ಕಿಕಟ್ಟೆ, ಉಡುಪಿ

೪೯) **ಕೆ. ಎಸ್. ರಾಜಾ ರಾವ್**—(ನಿವೃತ್ತ ಅಧಿಕಾರಿ ಡಿಫೆನ್ಸ್ ಇಲಾಖೆ) 198, 2ನೇ ಹಂತ, 2ನೇ ಬ್ಲಾಕ್ ಮೊದಲನೆ ಫೇಸ್ ಗಿರಿನಗರ, ಬೆಂಗಳೂರು-560085

೫೦) **ಕೆ. ರಾಮರಾವ್**—(ನಿವೃತ್ತ ಅಧಿಕಾರಿ ಹಣಕಾಸು ವಿಭಾಗ) 705, 5ನೇ ಮುಖ್ಯ ರಸ್ತೆ, ಶ್ರೀನಗರ, ಬೆಂಗಳೂರು-560050, ದೂರವಾಣಿ: 626028

೫೧) **ಎಂ. ಎಸ್. ಗುರುಪ್ರಸಾದ್**—(ಮಾಲೀಕರು ನಾಗಶ್ರೀ ಬುಕ್ ಹೌಸ್, ಜಯನಗರ ಬೆಂಗಳೂರು.) 110/20 ತ್ಯಾಗರಾಜ ನಗರ, 3ನೇ ಬ್ಲಾಕ್, ಬೆಂಗಳೂರು-560028, ದೂರವಾಣಿ: 6630993

೫೨) **ಟಿ. ಎಸ್. ಗಿರಿ**—(ಚಾರ್ಟ್ಟೆಡ್ ಅಕೌಂಟೆಂಟ್ ಸ್ವಂತ ಉದ್ಯೋಗ) ನಂ. 111 'ಕೃಷ್ಣಾ' 5ನೇ ಮುಖ್ಯ ರಸ್ತೆ, 1ನೇ ಬ್ಲಾಕ್, BSK III ಹಂತ 3ನೇ ಫೇಸ್ ಬೆಂಗಳೂರು-560085.

೫೩) **ಸಿ. ವಿ. ರಾವ್**—(ನಿವೃತ್ತ ಸೀನಿಯರ್, ಸೂಪರ್‌ವೈಸರ್, ಟೆಲಿಫೋನ್ ಇಲಾಖೆ] 'ಶ್ರೀನಿಕೇತನ' 3ನೇ 'A' ಕ್ರಾಸ್, 158/17ನೇ ಮುಖ್ಯರಸ್ತೆ, 2ನೇ ಹಂತ, ಜೆ. ಪಿ. ನಗರ ಬೆಂಗಳೂರು, ದೂರವಾಣಿ-643502.

೫೪) **ಎಚ್. ಎಸ್. ಚಕ್ರಪಾಣಿ** (ನಿವೃತ್ತ ರೈಲ್ವೆ ಅಧಿಕಾರಿ) 126/1 5ನೇ ಮುಖ್ಯರಸ್ತೆ ಚಾಮರಾಜ ಪೇಟೆ, ಬೆಂಗಳೂರು—56018

## ಮಹಿಳೆಯರು

೫೫) **ಶ್ರೀಮತಿ ವ್ಯಾಸನಕೆರೆ ಜಯಶ್ರೀ**—(ಡಾ| ಪ್ರಭಂಜನಾಚಾರ್ಯರ ಧರ್ಮಪತ್ನಿ)

೫೬] **ಶ್ರೀಮತಿ ಗೋಪಿಕಾ**—(ಶ್ರೀ ಪಿ. ವಿ. ಆರ್. ಕೆ. ಪ್ರಸಾದ್ ಇವರ ಧರ್ಮಪತ್ನಿ)

೫೭] **ಶ್ರೀಮತಿ ವಸಂತ ಕುಮಾರ ಪರಗಿ**—(ಶ್ರೀ ವಸಂತಕುಮಾರ್ ಪರಗಿ ಇವರ ಧರ್ಮಪತ್ನಿ)

೫೮] **ಶ್ರೀಮತಿ ಸಂಧ್ಯಾ ಸಿಂಹ**—[ಶ್ರೀ ಆರ್. ಎನ್. ಸಿಂಹ ಇವರ ಧರ್ಮಪತ್ನಿ]

೫೯] **ಡಾ. ಡಿ. ವಿ. ಕುಮುದ** (ಖಾಸಗಿ ವೈದ್ಯರು) ನಂ. 785, A 5ನೇ ಕ್ರಾಸ್ 7ನೇ ಮುಖ್ಯ ರಸ್ತೆ, ಮಹಾಲಕ್ಷ್ಮೀ ಲೇ ಔಟ್, ಬೆಂಗಳೂರು-56038, ದೂರವಾಣೀ 3320293.

೬೦] **ಶ್ರೀಮತಿ ವಾಣಿ ಕುಲಕರ್ಣಿ**—(ಡಾ| ವಿ. ಎಚ್. ಕುಲಕರ್ಣಿ ಇವರ ಧರ್ಮಪತ್ನಿ)

೬೧] ಶ್ರೀಮತಿ ಸತ್ಯನಾರಾಯಣ ರಾವ್ –(ಕೆ. ಎಸ್. ಸತ್ಯನಾರಾಯಣ ರಾವ್ —ಇವರ ಧರ್ಮಪತ್ನಿ)

೬೨] ಶ್ರೀಮತಿ ಶ್ರೀನಾಥ್ (ಸತ್ಯನಾರಾಯಣ ರಾವ್ ಇವರ ಸುಪುತ್ರಿ ವಿಕ್ರಾಂತ್ ಟೈರ್ಸ್‌ನಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ)

೬೩] ಶ್ರೀಮತಿ ರೋಹಿಣಿ ರಾಜರಾವ್—(ಶ್ರೀ ರಾಜರಾವ್ ಇವರ ಧರ್ಮಪತ್ನಿ) 3343 "ಈಶಾವಾಸ್ಯಂ" 13ನೇ ಮೈನ್, 6ನೇ ಕ್ರಾಸ್, HAC 1ನೇ ಹಂತ, ಬೆಂಗಳೂರು—560 008.

೬೪] ಶ್ರೀಮತಿ ಗುಂಡಮ್ಮ ಶೇಷಾದ್ರಿ—(ಎಂ. ಎಸ್. ಗುರುಪ್ರಸಾದ್ ಇವರ ಮಾತೃಶ್ರೀ)

೬೫] ಶ್ರೀಮತಿ ಸರಳಾ ರಾಘವೇಂದ್ರ ರಾವ್—(ಶ್ರೀ ರಾಘವೇಂದ್ರ ರಾವ್ ಇವರ ಧರ್ಮಪತ್ನಿ ಭಾರತೀಯ ದೂರವಾಣಿ ಕಾರ್ಖಾನೆಯಲ್ಲಿ ಸೇವೆ ಸಲ್ಲಿಸುತ್ತಿರುವರು) ನಂ. 133, 5ನೇ ಮುಖ್ಯ ರಸ್ತೆ, 4ನೇ ಬ್ಲಾಕ್, 2ನೇ ಫೇಸ್, BSK II ಸ್ಟೇಜ್ ಬೆಂಗಳೂರು–560 085.

೬೬] ಶ್ರೀಮತಿ ಪ್ರೇಮಾ ಮುರಳಿ—(ಸಿ. ಆರ್. ಮುರಳಿ ಇವರ ಧರ್ಮಪತ್ನಿ)

೬೭] ಶ್ರೀಮತಿ ರಾಮಚಂದ್ರ ರಾವ್ –(ಸಿ. ಆರ್. ಮುರಳಿ ಇವರ ಮಾತೃಶ್ರೀ)

೬೮] ಶ್ರೀಮತಿ ಶಾರದಮ್ಮ—(ಡಾ। ಪ್ರಭಾಕರ ರಾವ್ ಇವರ ಮಾತೃಶ್ರೀ)

೬೯] ಸಾವಿತ್ರಮ್ಮ—ಸರ್ವೇಯರ್ ರಸ್ತೆ, ಗಾಂಧಿ ಬಜಾರ್, ಬೆಂಗಳೂರು-560 004

೭೦] ಶ್ರೀಮತಿ ನಾಗರಾಜ ರಾವ್—[ನಾಗರಾಜ ರಾವ್ ಇವರ ಧರ್ಮಪತ್ನಿ]

೭೧] ಶ್ರೀಮತಿ ರತ್ನಬಾಯಿ—[ನಾಗರಾಜ ರಾವ್ ಇವರ ಮಾತೃಶ್ರೀ]

೭೨] ಶ್ರೀಮತಿ ಪರಿಮಳ—[ನಾಗರಾಜ ರಾವ್ ಇವರ ಸಹೋದರಿ]

೭೩] ಶ್ರೀಮತಿ ಮಧುರಾ ಬಾಯಿ—ಸಿಂಡಿಕೇಟ್ ಬ್ಯಾಂಕ್ ಕಾಲೋನಿ ನಂದಿನಿ ಲೇಔಟ್ ಬೆಂಗಳೂರು—56000

೭೪] ಶ್ರೀಮತಿ ಎಂ. ಕೆ. ರಾಘವೇಂದ್ರ ರಾವ್ ತುಳಸಿ—[ಎಂ. ಕೆ. ರಾಘವೇಂದ್ರರಾವ್ ಇವರ ಧರ್ಮಪತ್ನಿ] 'ಚೈತ್ರ' ಎನ್. ಆರ್. ಕಾಲೋನಿ ಬುಲ್ ಟೆಂಪಲ್ ರೋಡ್ ಬೆಂಗಳೂರು–560019.

೭೫] ಶ್ರೀಮತಿ ಉಮಾ ರುಕ್ಮಾಂಗದಾಚಾರ್ಯ—[ರುಕ್ಮಾಂಗದಾಚಾರ್ಯರ ಧರ್ಮಪತ್ನಿ.]

೭೬] ಶ್ರೀಮತಿ ಎಂ. ಆರ್. ನಾಗಮಣಿ— ಡಿ.ನಂ 110 'ತುಲಾಬಾರ' ಕೆಂಪೇಗೌಡ ನಗರ ಬೆಂಗಳೂರು—560019 ದೂರವಾಣಿ: 6603184.

೭೭] ಶ್ರೀಮತಿ ಬಿ. ಕೆ. ಗಿರಿಜಮ್ಮ — ಡಿ. ನಂ 110 'ತುಲಾಬಾರ' ಕೆಂಪೇಗೌಡನಗರ, ಬೆಂಗಳೂರು—560019, ದೂರವಾಣಿ : 6603184.

೭೮] ಶ್ರೀಮತಿ ಎಂ. ರತ್ನ ಮಾಧವರಾವ್ — ನಂ. 110, 'ತುಲಾಬಾರ', ಕೆಂಪೇಗೌಡ ನಗರ, ಬೆಂಗಳೂರು-560019

೭೯] ಶ್ರೀಮತಿ ಎ. ನಾಗರತ್ನ—62/1 1ನೇ A ಮುಖ್ಯರಸ್ತೆ, 7ನೇ ಬ್ಲಾಕ್, ಜಯನಗರ ಬೆಂಗಳೂರು-560082, ದೂರವಾಣಿ: 663962

೮೦] ಶ್ರೀಮತಿ ಪಿ. ಬಿ. ಕಟ್ಟಿ—[ಪಿ. ಬಿ. ಕಟ್ಟಿ ಇವರ ಧರ್ಮಪತ್ನಿ]

೮೧] ಶ್ರೀಮತಿ ಡಿ. ಬಿ. ನರ್ಮದಾಬಾಯಿ—[ಎಸ್. ಬಿಂದು ಮಾಧವರಾವ್ ಇವರ ಧರ್ಮಪತ್ನಿ]

೮೨] ಶ್ರೀಮತಿ ಭಾರತಿ ಪಾಂಗಣ್ಣಾಯ—[ದಿ. ನರಸಿಂಹ ಪಾಂಗಣ್ಣಾಯ ಇವರ ಧರ್ಮಪತ್ನಿ] ವಾದಿರಾಜ ರಸ್ತೆ, ಉಡುಪಿ.

## ಮಕ್ಕಳು

೮೩] ಚಿ। ವ್ಯಾಸನಕೆರೆ ಜಯಂತ—[ಡಾ। ಪ್ರಭಂಜನಾಚಾರ್ಯರ ಸುಪುತ್ರ]

೮೪] ಚಿ। ವ್ಯಾಸನಕೆರೆ ಸುವೀರ—[ಡಾ। ಪ್ರಭಂಜನಾಚಾರ್ಯರ ಸಹೋದರನ ಸುಪುತ್ರ]

೮೫] ಚಿ। ಶ್ರೀನಿಧಿ

೮೬] ಚಿ। ಶ್ರೀವತ್ಸ

೮೭] ಚಿ। ಸಮೀರ—[ಡಾ। ವಿ. ಎಚ್. ಕುಲಕರ್ಣಿ ಇವರ ಸುಪುತ್ರ]

೮೮] ಕುಮಾರಿ ಸ್ವಾತಿ—[ಡಾ। ವಿ. ಎಚ್. ಕುಲಕರ್ಣಿ ಇವರ ಸುಪುತ್ರಿ]

೮೯] ಚಿ। ಸಾರಂಗ ರಾಘವೇಂದ್ರರಾವ್—[ಶ್ರೀಮತಿ ಎಂ. ಕೆ. ರಾಘವೇಂದ್ರ ರಾವ್ ಇವರ ಸುಪುತ್ರ]

## ಮಠದ ಪರಿವಾರದವರು

೯೦] ಕೇಶವ ಜೋಗಿತ್ತಾಯ—[ಯಾತ್ರೆಯ ಪೂರ್ವಭಾವಿ ವ್ಯವಸ್ಥೆಯನ್ನು ನಿರ್ವಹಿಸಿದವರು]

೯೧] ಮಧುಸೂದನ ಆಚಾರ್ಯ

೯೨] ರಾಜಗೋಪಾಲಾಚಾರ್ಯ

೯೩] ವೇಂಕಟೇಶಾಚಾರ್ಯ, ಕೊರ್ಲಳ್ಳಿ

೯೪] ಗಿರೀಶ ಉಪಾಧ್ಯಾಯ

೯೫] ವೇಂಕಟೇಶ ರಾವ್ ಪಿ. ಎಸ್.

೯೬] ಗಿರೀಶ ಭಟ್ಟ

೯೭] ರಾಮಮೂರ್ತಿ ಭಟ್ಟ

೯೮] ರಾಘವೇಂದ್ರ ಭಟ್ಟ

೯೯] ಜನಾರ್ದನ ಭಟ್ಟ

೧೦೦] ಸದಾಶಿವ ಬಾಯರಿ

೧೦೧] ಪ್ರವೀಣ ಕುಮಾರ ಭಟ್ಟ

೧೦೨] ಶೈಲೇಶ್ ರಾವ್

೧೦೩] ಕೃಷ್ಣರಾಜ ಶರ್ಮಾ

೧೦೪] ಸುದರ್ಶನ ಶಿಕಾರಿಪುರ

೧೦೫] ಹರಿಕೃಷ್ಣ ಭಟ್ಟ

೧೦೬] ಉದಯ ಕುಮಾರ ಉಡುಪ

೧೦೭] ಪುರುಷೋತ್ತಮ ಭಟ್ಟ

೧೦೮] ಮಾಧವ ಭಟ್ಟ

೧೦೯] ಉಂಡಾರು ರಾಘವೇಂದ್ರ ಭಟ್ಟ

೧೧೦] ರಾಮಕೃಷ್ಣ ಭಟ್ಟ

೧೧೧] ರಾಮ ಭಟ್ಟ

೧೧೨] ಲಕ್ಷ್ಮೀಶ

೧೧೩] ವೇದವ್ಯಾಸ ಆಚಾರ್ಯ

ಕ್ಷೇಮಂ ನ ವಿಂದಂತಿ ವಿನಾ ಯದರ್ಪಣಂ
ತಸ್ಮೈ ಸುಭದ್ರಶ್ರವಸೇ ನಮೋ ನಮಃ ॥

# ನಮ್ಮ ಪ್ರಕಟಣೆಗಳು

೧) **ಶ್ರೀವಿಷ್ಣುಸಹಸ್ರನಾಮ ಸ್ತೋತ್ರ** 75-00

[ಪ್ರತಿಪದಾರ್ಥ ಚಂದ್ರಿಕಾ ಮತ್ತು ವಿ. ಸ. ನಾ. ಸ್ತೋತ್ರದ ಕುರಿತ ಹದಿಮೂರು ಪ್ರಬಂಧಗಳು.]

೨) **ಪಾತಿವ್ರತ್ಯ ಪ್ರದೀಪಿಕಾ** 40-00

[ಸ್ತ್ರೀಜಪಕ್ರಮ, ಸ್ತ್ರೀಧರ್ಮ ಇತ್ಯಾದಿಗಳ ವಿವರಣೆ.]

೩) **ಶ್ರುತಿಗೀತಾ** 25-00

[ಭಾಗವತಾಂತರ್ಗತ ಶ್ರುತಿಗೀತೆಯ ಅನ್ವಯಾರ್ಥ ತಾತ್ಪರ್ಯ ವಿವರಣೆಗಳೊಂದಿಗೆ.]

೪) **ವಾಯುತತ್ವಪ್ರದೀಪ** 20-00

[ಉಪನಿಷತ್ತುಗಳಲ್ಲಿ ಅಲ್ಲಲ್ಲಿ ಪ್ರಸ್ತುತಗಳಾದ ಪ್ರಾಣದೇವನ ನೂರಹತ್ತುನಾಮಗಳ ಸಂಗ್ರಹ, ವಿವರಣೆ.]

೫) **ನಾರಾಯಣವರ್ಮ** 10-00

[ಭಾಗವತಾಂತರ್ಗತ ನಾರಾಯಣವರ್ಮದ ಅನ್ವಯಾರ್ಥ ತಾತ್ಪರ್ಯ ವಿವರಣೆಗಳೊಂದಿಗೆ.] [ಪ್ರತಿಗಳು ಮುಗಿದಿವೆ]

೬) **ಅಂತರ್ಯಾಮಿ ತತ್ವ** 10-00

[ಉಪನಿಷತ್ತು ಮುಂತಾದವುಗಳಲ್ಲಿ ಬಂದಿರುವ ಅಂತರ್ಯಾಮಿತತ್ವದ ಸಮರ್ಥನೆ]

೭) **ಶ್ರೀ ವಿದ್ಯಾಮಾನ್ಯತೀರ್ಥರ ಸಂದೇಶ ಶತಕ** 5-00

[ಪ್ರತಿಗಳು ಮುಗಿದಿವೆ.]

೮) **ಶ್ರೀ ವಿದ್ಯಾಮಾನ್ಯತೀರ್ಥರ ಔಚಿತ್ಯಪೂರ್ಣ ದೃಷ್ಟಾಂತಗಳು** 5-00

ಪರವಿದ್ಯಾ ಪ್ರಕಾಶನ
ಮೂಡುಸಗ್ರಿ, ಉಡುಪಿ



## ಪಾವನಯಾತ್ರೆಯ ಸಂಯೋಜಕರ ಶುಭಾಶಯ

ಶ್ರೀ ಹರಿಗುರುಗಳ ಅನುಗ್ರಹದಿಂದ ನಮ್ಮ ಮಾಧ್ಯಮದಲ್ಲಿ ಪಾವನಯಾತ್ರೆ ರೂಪುಗೊಂಡಿರುವುದೇನೋ ನಿಜ. ಆದರೆ............

- 'ಪಾವನಯಾತ್ರೆ' ಪವನನಿಗೆ ಪ್ರೀತಿಕರವಾದ 'ಮಾಧ್ವ-ಉತ್ಸವ'ವಾಗಿ ಮೆರೆದದ್ದು ಶ್ರೀಮದಾಚಾರ್ಯರ ಚಲಪ್ರತಿಮೆಯಂತಿರುವ ನಮ್ಮ ಗುರುಗಳೂ, ಶ್ರೀಮದಾಚಾರ್ಯರ ಬೇರೆ ಬೇರೆ ಸೇವೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಶ್ರೀ ವಿಶ್ವೇಶತೀರ್ಥರೂ ಸಕ್ರಿಯವಾಗಿ ಪಾಲ್ಗೊಂಡಿದ್ದರಿಂದ.

- 'ಪಾವನಯಾತ್ರೆ' ಜ್ಞಾನಸತ್ರವಾಗಿ ಯಶಸ್ವಿಯಾಗಿದ್ದು ಡಾ। ಪ್ರಭಂಜನಾಚಾರ್ಯರ ಉದ್ಬೋಧಕ ಪ್ರವಚನಗಳಿಂದಾಗಿ.

- 'ಪಾವನಯಾತ್ರೆ' 'ಸಾಧನಾಕಮ್ಮಟ'ವಾಗಿ ಸಾರ್ಥಕವಾದದ್ದು ಸುಮಾರು ನೂರಕ್ಕಿಂತಲೂ ಹೆಚ್ಚು ನಿಷ್ಠಾವಂತ ಸಾಧಕರ ಶ್ರದ್ಧಾಪೂರ್ವಕವಾದ ಸಮಾವೇಶದಿಂದಾಗಿ.

- 'ಪಾವನಯಾತ್ರೆ'ಯ ಫಲ, ಪ್ರಭಾವ ಅದರಲ್ಲಿ ಪಾಲ್ಗೊಂಡ ಯಾತ್ರಿಕರಿಗಷ್ಟೇ ಸೀಮಿತವಾಗಿರದೆ ಎಲ್ಲೆಡೆ ನೆಲೆಸಿರುವ ಎಲ್ಲ ಸಾಧಕರಿಗೆ, ಜಿಜ್ಞಾಸುಗಳಿಗೆ ದೊರಕುವಂತೆ, ಯಾತ್ರೆ ನಡೆದ ಆ 'ಸಪ್ತಾಹಾವಧಿ'ಗಷ್ಟೇ ಕೊನೆಗೊಳ್ಳದೆ ಶಾಶ್ವತವಾಗಿ, ನಿರಂತರವಾಗಿ ಮುಂದುವರಿಯುತ್ತಿರುವಂತೆ ಯಾತ್ರೆಯ ರೂಪುರೇಖೆಯನ್ನು, ಅದರಲ್ಲಿ ಹೊರಹೊಮ್ಮಿದ ಸಂದೇಶಗಳನ್ನು, ಸಂದರ್ಶಿಸಲಾದ ಸ್ಥಳಗಳನ್ನು, ಅದರಿಂದ ನಿರೀಕ್ಷಿಸಲಾದ ಪರಿಣಾಮಗಳನ್ನು ಕ್ರೋಢೀಕರಿಸಿ, ಸೆರೆಹಿಡಿದಿರುವ ಸಗ್ರಿ ರಾಘವೇಂದ್ರ ಉಪಾಧ್ಯಾಯರ ಈ 'ಪಾವನಯಾತ್ರೆ' ಆಧ್ಯಾತ್ಮಿಕ ಪ್ರವಾಸ ಸಾಹಿತ್ಯದಿಂದಾಗಿ 'ಪಾವನಯಾತ್ರೆ' ಅಜರಾಮರವಾಗಿ, ವ್ಯಾಪಕವಾಗಿ ಪ್ರಭಾವ ಬೀರಬಲ್ಲ ಸಾಧನೆಯಾಗಿ ವಿರಾಜಿಸುವಂತಾಗಿದೆ.

ಶ್ರೀ ವಿದ್ಯಾಧೀಶತೀರ್ಥರು  
ಪಲಿಮಾರು ಮಠ (ಕಿರಿಯ ಪಟ್ಟ)  
ಉಡುಪಿ.